ಸಿದ್ಧಗಂಗಾ

ಸಂಪುಟ-೨೨ ಸಂಚಿಕೆ-೮ ಆಗ೸್ಟ್, ೧೯೮೬

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸಿದ್ಧಿಯು ಶ್ರೀ ಫಲವು ಇದ್ದಲ್ಲಿ ಬರಬೇಂದೆ
ಶ್ರದ್ಧೆ ಸಾಧನೆಯಿಂದ ದುಡಿಯೆಂದೆ। ನನ್ನತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು ॥

* * *

ಎಣ್ಣೆ ಬತ್ತಿ ಬೆರೆದು ಜ್ಯೋತಿ ಬೆಳಗುವ ಹಾಗೆ
ಅರಿವು ಆಚಾರ ಒಡಬೆರೆದು। ಬಾಳೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಭಿಕ್ಷಕ್ಕೆ ಎಡೆಯಿಲ್ಲ ಶರಣ ಧರ್ಮದೊಳಗೆ
ಲಕ್ಷ ಕಾಯಕದಿ ಒಂದನ್ನು। ಹಿಡಿಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ

| ಲೇಖನದ ಹೆಸರು | ಲೇಖಕರ ಹೆಸರು | ಪುಟ |
|---|---|---|



# ಶ್ರೀವಾಣಿ

ಈ ದೇಹವು ಈಶ್ವರನ ಪ್ರಸಾದ ಕಾಯ, ಅದನ್ನು ಕೆಡಿಸಬಾರದು, ಅನಾರೋಗ್ಯಗೊಳಿಸಿಕೊಳ್ಳಬಾರದು. ವೃದ್ಧಾಪ್ಯದಲ್ಲಿ ಶೈಥಿಲ್ಯ ಗೊಳ್ಳುವುದು ದೇಹಧರ್ಮ, ಅದರ ಬಗೆಗೆ ಯತ್ನವಿಲ್ಲ. ಅಕಾಲದಲ್ಲಿ ಅದು ಕರ್ತವ್ಯ ಕರ್ಮಗಳನ್ನು ಮಾಡುವ ಪಟುತ್ವ ಕಳೆದು ಕೊಳ್ಳಬಾರದು ಪಟುವಾಗಿರಬೇಕು. ರೋಗಾದಿಗಳಿಗೆ ತುತ್ತಾಗದ ಹಾಗೆ ನೋಡಿ ಕೊಳ್ಳುವುದು ಒಂದು ಪೂಜೆಯೇ.

ಅಕಾಲದಲ್ಲಿ ರೋಗಾದಿಗಳಿಗೆ ತುತ್ತಾದರೆ ನಾವು ಶಿವನ ಯಾವುದೋ ಕಟ್ಟಳೆಯನ್ನು ಮೀಕ್ಕಿದ್ದೇವೆ ಎಂದು ಅರ್ಥ. ದೇಹಕ್ಕೆ ಬೇಕಾಗುವ ಪ್ರಸಾದವನ್ನು ಅದಕ್ಕೊದಗಿಸಿ ಪ್ರಸಾದದಿಂದ ಪ್ರಸನ್ನ ಪರಿಣಾಮ ಎನಿಸಿಕೊಳ್ಳಬೇಕು. ನಾಲಿಗೆಯ ಚಾಪಲ್ಯಕ್ಕೆ ಪ್ರಸಾದವಲ್ಲ. ಹಾಗಾಗಿದ್ದರೆ ಅದು ಪ್ರಸಾದ ಎಂಬ ಹೆಸರನ್ನೆ ಪಡೆಯುತ್ತಿರಲಿಲ್ಲ. ದೇಹ ಮನಬುದ್ಧಿಗಳಿಗೆ ಪ್ರಸನ್ನ ಪರಿಣಾಮದ ಮೂಲಕ ಮಹಾಲಿಂಗಕ್ಕೆ ತೃಪ್ತಿ ಕೊಡಬೇಕು. ನಾಲಿಗೆಯ ಚಾಪಲ್ಯಕ್ಕೆ ಕಟ್ಟುಬಿದ್ದು ಹೆಚ್ಚಾಗಿ ಬೇಕು ಬೇಕಾದ ಪ್ರಸಾದ ಸ್ವೀಕರಿಸಿ, ಇನ್ನೊಂದಕ್ಕೆ ತೊಂದರೆಕೊಟ್ಟು ಪ್ರಸಾದವನ್ನು ವಿಷವನ್ನಾಗಿಸಿ ಪ್ರಸಾದ ಕಾಯವನ್ನು ಕೆಡಿಸಬಾರದು. ಅದರಿಂದ ಕ್ರಿಯೆಗೆ ಭಂಗ ಬಂದು ಶರಣತತ್ವವನ್ನು ಪಾಲಿಸದಂತಾಗುವುದಿಲ್ಲ. ಪ್ರಸಾದ ಕ್ರಿಯೆ ಅನಾದೃತವಾದುದು. ಶಾಸ್ತ್ರಗಾಮಿತ್ವದ್ದು.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ.ಸಂಪಾದಕರು

ಟಿ. ಎನ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 201-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಂಚೆ ಸ್ಟ್ಯಾಂಪ್ ಕಳೆದು ಹೋದರೆ ಸಂಪಾದಕರು ಜವಾಬ್ದಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಅಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ–572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ...ಂದು ನಂದಾದೀಪ

ತಲೆಯ ಮೇಲೆ ಸದಾ ಮುಸುಕು, ಹಣೆಯಲ್ಲಿ ವಿಭೂತಿಯ ನಿತ್ಯ ಚೆಲುವು,
...ರಳಲ್ಲಿ ರುದ್ರಾಕ್ಷಿ ಮಾಲೆ. ಕೈಯಲ್ಲಿ ರುದ್ರಾಕ್ಷಿ ಕಂಕಣ, ಉಟ್ಟದ್ದು ಶ್ವೇತವಸನ,
...ಟ್ಟದ್ದೂ ಶುಭ್ರ ಶ್ವೇತ ರವಿಕೆ, ಕಾರುಣ್ಯದ ಕಣ್ಣು, ಮೃದುವಾದ ಮಾತು, ಸದಾ
...ಯ್ತನದ ತಂಪುಕಾಂತಿ. ಇದು ತುಳಿದವರಿಗೆಲ್ಲ ಅರಿವಿಗೆ ಬಂದ "ಅನನ್ಯಶರಣೆ'
...ಧ್ಯಾತ್ಮ ಜೀವಿ, ಸಿದ್ಧರಾಮ ಶಿವಯೋಗಿಯ ಮೀಸಲ ಭಕ್ತೆ. ಲಿಂಗೈಕ್ಯ ಜಯದೇವ
...ಯಿ ಲಿಗಾಡೆಯವರ ಚಿರಂತನ ನೆನಪು ಈಗ. ಲಿಗಾಡೆ ಮನೆತನದ ಹೆಸರು.

ಜಯದೇವಿ ತಾಯಿ ಯವರು ಪ್ರಾತಃ ಸ್ಮರಣೀಯ ಪೂಜ್ಯರು 1912 ರಲ್ಲಿ ಜನನ.
...ಪ್ಪತ್ನಾಲ್ಕು ವರ್ಷಗಳ ತುಂಬು ಜೀವನ. ಅಪ್ಪಟ ಭಾರತೀಯತೆ, ಪರಿಶುದ್ಧ ಶರಣ
...ಸ್ಕೃತಿಯ ಜೀವಂತಿಕೆ. ಕೃಷಿಕ ಮನೆತನದಲ್ಲಿ ಅರಳಿದ ಭಕ್ತಿ ಪುಷ್ಪ. ಶರಣ
...ಸ್ಕೃತಿ ಕಂಡ ಆಧುನಿಕ ಅಕ್ಕ. ವಾರದ ಮಲ್ಲಪ್ಪನವರು ವಿಖ್ಯಾತ ಶರಣ ಧರ್ಮಾ
...ಯಾಯಿಗಳು ಅವರ ಮೊಮ್ಮಗಳು ಜಯದೇವಿ ಓದಿದ್ದು ಮ್ಯಾಟ್ರಿಕ್. ಡಾಕ್ಟ
...ಟ್ ಪದವಿ ಪಡೆದದ್ದು ವಿಶ್ವವಿದ್ಯಾನಿಲಯದಿಂದ.

ಸಾಹಿತಿಯಾಗಿ, ತಾಯಿಯವರ, ಚಿರಪರಿಚಿತರು ಕನ್ನಡನಾಡಿಗೆ. ಅವರು
...ದ ಕೃತಿಗಳು ಸಿದ್ಧರಾಮೇಶ್ವರ ಪುರಾಣ, ತಾರಕ್ಕ ತಂಬೂರಿ, ಸಿದ್ಧರಾಮ, ಸಿದ್ಧ
...ಣಿ, ಬಸವದರ್ಶನ, ಮಹಾಯೋಗಿನಿ, ಬಸವ ವಚನಾಮೃತ, ತಾಯಿಯ ಪದ
...–ಇತ್ಯಾದಿ. ಸಿದ್ಧರಾಮೇಶ್ವರ ಪುರಾಣ ಮಹಾಕಾವ್ಯ ತ್ರಿಪದಿಯಲ್ಲಿ ರಚಿತ
...ದ ಇಪ್ಪತ್ತನೆಯ ಶತಮಾನದ ಕೃತಿ. ತ್ರಿಪದಿ ಕಾವ್ಯಗಳಲ್ಲಿ ಅಗ್ರಗಣ್ಯ ಕೃತಿ.
...ಹಾಕಾವ್ಯ ರಚಿಸಿದ ಏಕೈಕ ಮಹಿಳಾರತ್ನ ಜಯದೇವಿ ತಾಯಿ.

ಸಮಾಜ ಸೇವೆಗಾಗಿ ಜೀವನದುದ್ದಕ್ಕೂ ದುಡಿದ 'ತಾಯಿ' ಯವರು ಮಹಾ
...ಷ್ಟ್ರದಲ್ಲಿ ಕನ್ನಡ ಸಂಸ್ಕೃತಿಯ ರಾಯಭಾರಿಯಾಗಿ ಬಾಳಿದರು. ಕನ್ನಡದ ಕಳಕಳಿ
...ಗಡಿನಾಡಿನಲ್ಲಿ ಪರಿಣಾಮದಾಯಕವಾಗಿ ಬಿತ್ತಿದರು. ಮಹಾರಾಷ್ಟ್ರದಲ್ಲಿ
...ಸೊಲ್ಲಾಪುರದಲ್ಲಿ ಕನ್ನಡದ ಕೋಟೆ ಕಟ್ಟಿದರು; ಬಸವ ಕಲ್ಯಾಣದಲ್ಲಿ ಕೊನೆ
...ದಲ್ಲಿ ನೆಲೆ ನಿಂತರು ಕರ್ನಾಟಕದ ಏಕೀಕರಣಕ್ಕಾಗಿ ದುಡಿದರು.

ಹೈದರಾಬಾದ್ ಕರ್ನಾಟಕಕ್ಕೆ ತಾಯಿಯವರಿಂದ ಸಂದ ಸೇವೆ ದೊಡ್ಡದು.
ಮಹಿಳಾ ಜಾಗೃತಿ ತಂಡಕಟ್ಟಿ ದುಡಿದ ಜೀವ. ಸಾಮಾಜಿಕ ಸೇವಾಕ್ಷೇತ್ರದ ಅನುಭವ
ಸಾಹಿತ್ಯಕ್ಕೆ ಅನುವು ಮಾಡಿಕೊಟ್ಟಿತು. ಬಸವಾದಿ ಪ್ರಮಥರ ಆದರಲ್ಲೂ ಸಿದ್ಧ
ರಾಮ ಶಿವಯೋಗಿಯ ಅನನ್ಯ ಭಕ್ತೆಯಾದರು. ಆಗರ್ಭ ಶ್ರೀಮಂತ ಮ ನೆತನದಿಂದ
ಬಂದರೂ ಚಿನ್ನದ ಹಂಗು ತೊರೆದು ರುದ್ರಾಕ್ಷಿಧಾರಣೆ ಮಾಡಿದರು. ಹೆಣ್ಣು ಬಂಗಾ
ರಕ್ಕೆ ಬಾಯಿಬಿಡುವಳೆಂಬುದಕ್ಕೆ ಅಪವಾದವಾದರು.

ಜಯದೇವಿ ತಾಯಿ ಲಿಗಾಡೆಯವರನ್ನು ಕನ್ನಡ ನಾಡು ಗೌರವಿಸಿತು. 1975
ರಲ್ಲಿ ಮಂಡ್ಯದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ
ಮಾಡಿ ಕನ್ನಡ ಸಾಹಿತ್ಯ ಪರಿಷತ್ ಗೌರವಿಸಿದ ಏಕೈಕ ಮಹಿಳಾಮಣಿ. ಕನ್ನಡ
ಮರಾಠಿ, ಹಿಂದಿಯನ್ನು ಬಲ್ಲವರಾಗಿದ್ದರು ತಾಯಿ. ಮರಾಠಿಯಲ್ಲಿ ಸಾಹಿತ್ಯ ಕೃಷಿ
ಮಾಡಿದವರು. ಶೂನ್ಯ ಸಂಪಾದನೆಯನ್ನು ಮರಾಠಿಗೆ ಪರಿಚಯಿಸಿದ್ದರು. ಕರ್ನಾ
ಟಕ ವಿಶ್ವವಿದ್ಯಾನಿಲಯ ಏರ್ಪಡಿಸಿದ್ದ ಜಾನಪದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ
ಯನ್ನು ವಹಿಸಿದ್ದರು. ತಾಯಿಯವರ ಸಾಹಿತ್ಯ ಶ್ರೀಮಂತಿಕೆ 1950 ರಿಂದ ಬೆಳೆದು
ಬಂದುದು. ಎಲ್ಲ ಬರಹಗಳಲ್ಲೂ ತಾಯಿ ವಾತ್ಸಲ್ಯದ ತಂಪು ಬೆಳಕು. ಸಾಮಾಜಿ
ಕ್ಷೇತ್ರದಲ್ಲಿ ಚಿರಂತನ ಸ್ಫೂರ್ತಿ. ಭಾವನಾ ಜೀವಿ; ಮಹಾಚೇತನ, ಅಪರೂಪದ
"ತಾಯಿ" 25-7-1986 ರ ಶುಕ್ರವಾರ ಲಿಂಗದೊಳಗಾದರು. ಬಸವ ಕಲ್ಯಾಣದ
"ಭಕ್ತಿಭವನದ' ಹಿಂಬದಿಗೆ ನಿಂದು ಬೆಳಕಾದರು.

ವಸುಧಿಯಲಿ ಹುಟ್ಟಿ ಹಸನಾಯಿತು ಎನಬಾಳು
ಬಸವೇಶ ನಿನ್ನ ದಯದಿಂದ
ಬಸವೇಶ ನಿನ್ನ ದಯದಿಂದ— ಜನುಮದ
ಹುಸಿ ಎಲ್ಲ ಕೊಚ್ಚಿ ಹರಿದೊಯ್ತು ||

ಜಗದ ಜಂಜಡದಿಂದ ಜಾರಿ ನಾ ನಡೆದೇನ
ಆಗು ಹೋಗುಗಳ ಆಚೀಕ
ಆಗು ಹೋಗುಗಳ ಆಚೀಕ—ಇರುವಂಥ
ಚಾಗಿ ಸಿದ್ಧನ ಛತ್ರರಕ ||

ಬಸವೇಶನ ದಯದಿಂದ ಹಸನಾದ ಬಾಳು ಬಾಳಿ, ಜನದ ಜಂಜಡದಿಂದ ಜಾ
ನಡೆದು, ಆಗು ಹೋಗುಗಳ ಆಚೆಗೆ ನಿಂದು 'ಚಾಗಿ ಸಿದ್ಧನ ಛತ್ತರ'ದಿಸಂದ ಶರಣೆ ಜಯ
ದೇವಿ ತಾಯಿ ಲಿಗಾಡೆಯವರ ಪವಿತ್ರಾತ್ಮಕ್ಕೆ ಭಕ್ತಿಪೂರ್ವಕ ಶರಣು ಶರಣಾರ್ಥಿಗಳು.

ಸಿದ್ಧಗಂಗ

# ಮಾಣಿಕ್ಯ ದೀಪ್ತಿ

—ಎಚ್. ಎಸ್. ಸಿದ್ಧಗಂಗಪ್ಪ. ಎಂ. ಎ,
ಸಾಮಾಜಿಕ ಕಾರ್ಯಕರ್ತ, ಚರ್ಮ ಮತ್ತು ಗುಪ್ತರೋಗ ವಿಭಾಗ,
ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ-577 201

## ಚಿಂತೆ

"ಚಿಂತೆ ಇಲ್ಲದವನಿಗೆ ಸಂತೇಲೂ ನಿದ್ದೆ ಬಂತು" ಎಂಬುದು ಒಂದು ಜನಪ್ರಿಯ ಗಾದೆ. ನಿದ್ರೆ ಅದೂ ಸುಖನಿದ್ರೆ ಎಲ್ಲರಿಗೂ ಬರುವುದಿಲ್ಲ. ಯಾವ ವ್ಯಕ್ತಿಗೆ ನಾಳಿನ ಬಗ್ಗೆ ಚಿಂತೆ ಇರುವುದಿಲ್ಲವೋ ಅವನು ಸುಖವಾಗಿ, ಮರದ ಕೊರಡಿನಂತೆ ಅಲುಗಾಡದೆ ನಿದ್ರೆಯಲ್ಲಿ ಮೈಮರೆಯುತ್ತಾನೆ. ಆದರೆ ಚಿಂತೆ ಇಲ್ಲದ ವ್ಯಕ್ತಿಯನ್ನು ಕಾಣುವುದು ತುಂಬ ಅಪರೂಪ. ಏಕೆಂದರೆ ಒಬ್ಬರಿಗೆ ಒಂದೊಂದು ಚಿಂತೆ ಕಾಡುತ್ತಿರುತ್ತದೆ. ಕೆಲವರಿಗೆ ಒಂದು ಚಿಂತೆಯಾದರೆ, ಮತ್ತೆ ಕೆಲವರಿಗೆ ಹಲವಾರು ಚಿಂತೆ. ಚಿಂತೆ ಎನ್ನುವುದು ಮನುಷ್ಯನನ್ನು ಜೀವವಿರುವಾಗಲೇ ಸುಟ್ಟು ಹಾಕುವ ಜ್ವಾಲಾಮುಖಿ. ಚಿಂತೆಗೂ ಚಿತೆಗೂ ಇರುವ ನಂಟು ಬಿಡಿಸಲಾಗದ ಗಂಟು ಎಂದು ಬಲ್ಲವರು ಹೇಳುತ್ತಾರೆ. ಚಿಂತೆ ಎಂಬ ಸುಳಿಯಲ್ಲಿ ಸಿಕ್ಕಿದ ವ್ಯಕ್ತಿ ಅದರಿಂದ ಬಿಡುಗಡೆಯಾಗಲು ಪ್ರಯತ್ನಿಸುತ್ತಿರುವಾಗಲೇ ಹಲವಾರು ಚಿಂತೆಗಳಿಗೆ ಆಶ್ರಯ ನೀಡುತ್ತಾ ಹೋಗುವುದು ಅವನ ಮಾನಸಿಕ ದೌರ್ಬಲ್ಯಕ್ಕೆ, ಅವನಿಗೊದಗಿರುವ ದುಃಸ್ಥಿತಿಗೆ ಹಿಡಿದ ಕನ್ನಡಿ. ಚಿಂತೆ ಹೆಚ್ಚಾದಂತೆ ಮಾನಸಿಕವಾಗಿ ಕುಗ್ಗುತ್ತಾನೆ. ತಾನು ಮಾಡುವ ಕೆಲಸದಲ್ಲಿ ನಿರಾಸೆ, ನಿರಾಸಕ್ತಿ, ನಿರುತ್ಸಾಹ ತೋರಿಸುತ್ತಾನೆ.

ಚಿಂತೆ ವ್ಯಕ್ತಿಯ ಮಾನಸಿಕ, ಬೌದ್ಧಿಕ ಸ್ಥಿತಿಗನುಗುಣವಾಗಿ ವ್ಯತ್ಯಾಸವಾಗುತ್ತಾ ಹೋಗುತ್ತದೆ. ಇಲ್ಲದ್ದನ್ನು ಬಯಸುವುದು ಚಿಂತೆ. ಇದ್ದರೊಂದು ಚಿಂತೆ, ಇಲ್ಲದಿರುವುದು ಇನ್ನೊಂದು ಚಿಂತೆ. ಸತಿ ಇದ್ದರೂ ಚಿಂತೆ, ಸತಿ ಇಲ್ಲದಿದ್ದರೂ ಚಿಂತೆ. ಮತಿ ಹೀನ ಕುರೂಪಿಯಾದರೂ ಚಿಂತೆ. ಕಡು ಚೆಲುವೆಯಾದರೆ ಸದಾ ಅವಳನ್ನು ಕಾಯುವ ಚಿಂತೆ ಎಂದು ಪುರಂದರದಾಸರು ಚಿಂತೆಯ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ.

ಅಂಬಿಗರ ಚೌಡಯ್ಯ ಒಂದು ಕಡೆ "ಬಡತನಕ್ಕೆ ಉಂಬುವ ಚಿಂತೆ. ಉಣಲಾದರೆ ಉಡುವ ಚಿಂತೆ, ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ

ಚಿಂತೆ, ಇಂತೀ ಹಲವು ಚಿಂತೆಯಿಂ ಇಪ್ಪವರನು ಕಂಡೆನು ಶಿವನ ಚಿಂತೆಯಲ್ಲಿದ್ದ ವರೊಬ್ಬರನು ಕಾಣೆನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು" ಎಂದಿದ್ದಾನೆ. ವ್ಯಕ್ತಿಗಳಲ್ಲಿ ಸುಪ್ತವಾಗಿರುವ ಆಸೆ ಹೇಗೆ ಸ್ಥಿತಿಗತಿಗಳಿಗನುಗುಣವಾಗಿ ಬದಲಾಗುತ್ತಾ ಹೋಗುತ್ತದೆ ಎಂಬುದನ್ನು ಸರಳವಾಗಿ ನಿರೂಪಿಸಿದ್ದಾನೆ.

ವಿದ್ಯಾರ್ಥಿಗಳಿಗೆ ಪರೀಕ್ಷೆಯ ಚಿಂತೆ, ನಿರುದ್ಯೋಗಿಗಳಿಗೆ ಉದ್ಯೋಗದ ಚಿಂತೆ, ಉದ್ಯೋಗ ಇದ್ದವಂಗೆ ಹಣ, ಆಸ್ತಿ ಗಳಿಸುವ ಚಿಂತೆ, ಸೈಕಲ್ ಇದ್ದವನಿಗೆ ಸ್ಕೂಟರ್ ಚಿಂತೆ, ಸ್ಕೂಟರ್ ಇದ್ದವನಿಗೆ ಕಾರಿನ ಚಿಂತೆ. ಸೈಟು ಇಲ್ಲದವನಿಗೆ ಸೈಟು ಕೊಳ್ಳುವ ಚಿಂತೆ, ಸೈಟು ಇದ್ದವನಿಗೆ ಮನೆ ಕಟ್ಟಿಸುವ ಚಿಂತೆ, ಮನೆ ಕಟ್ಟಿಸಿದ ಮೇಲೆ ಸಾಲ ತೀರಲಿಲ್ಲವಲ್ಲ ಎಂಬ ಚಿಂತೆ, ಮಕ್ಕಳಿಲ್ಲದ ಚಿಂತೆ ಒಂದು ಕಡೆಯಾದರೆ, ಮಕ್ಕಳ ಸಂಖ್ಯೆ ಹೆಚ್ಚಾಯಿತೆಂದು ಮತ್ತೊಂದು ಕಡೆ ಚಿಂತೆ. ಮಕ್ಕಳಿದ್ದ ಮಾತ್ರಕ್ಕೆ ಚಿಂತೆ ತಪ್ಪಿತೆಂದು ಭಾವಿಸುವಂತಿಲ್ಲ ಭಾವಿಸಲೂ ಬಾರದು. ಮಕ್ಕಳು ಜಾಣರಾಗದಿದ್ದರೆ ಒಂದು ಬಗೆಯ ಚಿಂತೆಯಾದರೆ, ಜಾಣರಾಗಿದ್ದೂ ಗಳಿಸುವವರಾಗದಿದ್ದರೆ ಇನ್ನೊಂದು ಬಗೆಯ ಚಿಂತೆ. ಬಡತನ ಬಂದರೂ ಚಿಂತೆ, ಶ್ರೀಮಂತಿಕೆ ಇದ್ದರೂ ಚಿಂತೆ. ಅಂತೂ ಇಂತು ಚಿಂತೆ ಒಳ ಸೇರುವುದಕ್ಕೆ ಒಂದಿಲ್ಲೊಂದು ಹಾದಿ ತೆರೆದೇ ಇರುತ್ತದೆ.

ಚಿಂತೆಗೆ ಮೂಲ ಕಾರಣ, ಪ್ರೇರಣೆ, ಆಸೆ, ಮಿತಿ ಮೀರಿದ ಆಕಾಂಕ್ಷೆ. ಆಸೆ ಹೆಚ್ಚಾದಂತೆ ಚಿಂತೆ ವ್ಯಕ್ತಿಯ ಮನಸ್ಸಿನಲ್ಲಿ ದಟ್ಟವಾಗುತ್ತದೆ. ಚಿಂತೆಯನ್ನು ಬಿಡಬೇಕು ಎಂದು ಹೇಳಿದರೂ ಬಿಡಬೇಕೆಂದು ಕೊಂಡರೂ ಬಿಡುವುದು ಅಷ್ಟೊಂದು ಸುಲಭವಲ್ಲ ನಮ್ಮನ್ನು ಮುತ್ತಿಕೊಂಡಿರುವ ಅಪ್ಪಿಕೊಂಡಿರುವ ಚಿಂತೆಯನ್ನು ಒಮ್ಮೆಲೇ ಬಿಡಲಾಗದಿದ್ದರೂ, ಅದು ನಾಗಾಲೋಟದಿಂದ ದಿಕ್ಕು ದೆಸೆಯಿಲ್ಲದೆ ಓಡುವುದನ್ನು ಮನಸ್ಸು ಮಾಡಿದರೆ ನಿಯಂತ್ರಿಸಬಹುದು. ಅದಕ್ಕೆ ಒಂದು ಉಪಾಯವೆಂದರೆ ಹಾಸಿಗೆ ಇದ್ದಷ್ಟು ಕಾಲನ್ನು ಚಾಚಬೇಕೆನ್ನುವ ಮನೋಭಾವನ್ನು ರೂಢಿಸಿಕೊಳ್ಳಬೇಕು. ಅದು ಹೇಗೆ ಸಾಧ್ಯ ಎನ್ನಲೂ ಬಹುದು. ಯಾರೊ ಒಬ್ಬ ವ್ಯಕ್ತಿ ತನಗೆ ಹಾಕಿಕೊಳ್ಳಲು ಪಾದರಕ್ಷೆ ಇಲ್ಲ ಎಂದು ಕೊರಗುತ್ತಿದ್ದನಂತೆ. ಒಮ್ಮೆ ಕಾಲಿಲ್ಲದ ವ್ಯಕ್ತಿಯನ್ನು ನೋಡಿ, ನನಗೆ ದೇವರು ಓಡಾಡಲು ಕಾಲುಗಳನ್ನಾದರೂ ಕೊಟ್ಟಿದ್ದಾನೆ. ಆತನಿಗೆ ಆ ಭಾಗ್ಯವೂ ಇಲ್ಲ ಎಂದು ಯೋಚಿಸಿ ಪಾದರಕ್ಷೆ ಬಗ್ಗೆ ಚಿಂತೆ ಮಾಡುವುದನ್ನು ಬಿಟ್ಟನಂತೆ. ಯಾವ ವ್ಯಕ್ತಿಯೇ ಆಗಲಿ ತನಗಿಂತ ಕೆಳಗಿನವರನ್ನು ನೋಡಿ ಜೀವನ ನಡೆಸುವ ಮನೋಭಾವವನ್ನು ಬೆಳಸಿಕೊಳ್ಳಬೇಕು. ಚಿಂತೆಯನ್ನು ಚಿಂತನವನ್ನಾಗಿ ಮಾರ್ಪಡಿಸಿಕೊಂಡರೆ, ಸ್ವಲ್ಪಮಟ್ಟಿಗಾದರೂ ಸಂತೋಷ, ನೆಮ್ಮದಿ ದೊರೆಯುತ್ತದೆ.

(ಆಕಾಶವಾಣಿ ಕೃಪೆ) ●

# ಬಸವ ಪ್ರತಿಜ್ಞಾ

—ಟಿ. ಎನ್. ಮಹದೇವಯ್ಯ

"ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು. ನಾನಾವಾವ ಕರ್ಮಂಗಳ ಮಾಡಿದಡೆಯೂ, ಆ ಕರ್ಮಫಲ ಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು. ನೀಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರಿಯ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು, ನಿಮ್ಮಾಣೆ ಕೂಡಲ ಸಂಗಮ ದೇವ."

ಮಹಾ ಪುರುಷರು ಜನ್ಮವೆತ್ತುವುದು ಯಾವಾಗಲೂ ಪರಹಿತಕ್ಕಾಗಿ, ಅವರು ಮಾಡುವ ಕರ್ಮಗಳೆಲ್ಲ ಪರರಿಗಾಗಿ, ಅವರದೆಂದು ತಿಳಿದುಕೊಳ್ಳುವುದೆಲ್ಲವೂ ಪರರದೇ ಇರುತ್ತದೆ. ಜಗತ್ತೆಲ್ಲವನ್ನು ವಿಶಾಲ ಹೃದಯದಿಂದ ಹೊರಬೀಳುವ ಪ್ರೇಮದಿಂದ ಆದರಿಸುವರು. ಜಗತ್ತೇ ತಮ್ಮ ಮನೆ. ವಿಶ್ವದ ಎಲ್ಲ ಜೀವಗಳೂ ತಮ್ಮ ಬಂಧುಗಳೆಂಬ ಉಚ್ಛತರವಾದ ವಿಶ್ವಪ್ರೇಮವು ಅವರಲ್ಲಿರುತ್ತದೆ. ಮಹಾತ್ಮ ಗಾಂಧೀಜಿಯವರು "ಪ್ರೇಮವೇ ಈ ಸೃಷ್ಟಿಯ ಸೂತ್ರವು. ಅದೇ ಜೀವನದ ರಹಸ್ಯವು." ನಾನು ಪ್ರೇಮಿ ಎನ್ನುತ್ತಾರೆ. ಇಂಥ ಶ್ರೇಷ್ಠ ಸೂತ್ರವು ಅವರ ಜೀವನದ ಸೂತ್ರವಾಗುತ್ತದೆ. ಈ ಪ್ರೇಮದ ಆರಾಧನೆಯಿಂದ ಹೃದಯದ ಸಂಕುಚಿತ ಭಾವನೆಯು ಅಳಿದು ವಿಶಾಲವಾಗುವುದು. ಅಹಂಕಾರವಡಗುವುದು ದೇವನನ್ನು ಆರಾಧಿಸಿದಂತಾಗುವುದು ಸ್ವಾಮಿ ರಾಮತೀರ್ಥರು ಹೀಗೆ ನುಡಿದಿರುವರು.—"ಪ್ರೇಮವು ದಿವ್ಯ ಪ್ರಾಣ ಜ್ಯೋತಿಯು ಇರುತ್ತದೆ. ಪ್ರೇಮಕ್ಕೆ ಸಣ್ಣ ದೊಡ್ಡ ಜನರ ಉಚ್ಛನೀಚ ಜನರ ಮತ್ತು ಬಡ ಶ್ರೀಮಂತ ಜನರ ಭೇದಾಭೇದವಿರುವುದಿಲ್ಲ. ಪ್ರೇಮವನ್ನು ಎಂದೂ ಮಾಡದೆ ಇರುವವನಿಗೆ ಈಶ್ವರನ ಜ್ಞಾನವು ಆಗಲಾರದು. ಪರಮೇಶ್ವರನು ಪ್ರೇಮ ರೂಪನು ಇರುತ್ತಾನೆ. ಆದುದರಿಂದ ಕೃತ್ರಿಮ ಪ್ರೇಮ ಮಾಡುವುದರಿಂದ ಪರಮೇಶ್ವರನ ಅಪಮಾನ ಮಾಡಿದಂತಾಗುವುದು. ಅದಕ್ಕಾಗಿಯೇ ಮಹಾತ್ಮರೆಲ್ಲರೂ ತಮ್ಮ ಜೀವನವನ್ನು ಪರಹಿತಕ್ಕಾಗಿ ಬಲಿಕೊಟ್ಟ ವಿಶ್ವಪ್ರೇಮಿಗಳಾಗಿರುತ್ತಾರೆ.

ಮನುಷ್ಯನು ಪ್ರಪಂಚದ ಸಂಗಡ ವ್ಯವಹರಿಸುವಾಗ ನಿಷ್ಕಾಮ ದೃಷ್ಟಿಯಿಂದ ಕರ್ಮ ಮಾಡಿದರೆ ಅವನ ಜೀವನವು ಭವ್ಯವಾದ ಹಾದಿ ಹಿಡಿದು ಮುಂದುವರಿಯುವುದು. ಹುಟ್ಟಿದ ಮೇಲೆ ಕರ್ಮ ಬಿಡಲಾಗದು. ಅದನ್ನು ಮಾಡುವಾಗ ಎಲ್ಲವನ್ನೂ ದೇವನಿಗೆ ಅರ್ಪಿಸಿರುವುದೇ ಉತ್ತಮ. ಜಗತ್ತಿನ ಐಶ್ವರ್ಯವು ದೇವನದು. ಅದು

ಮತ್ತೆ ಅವನಿಗೇ ಹೋಗಲಿ. ಅದರ ಸಂಗಡವು ವ್ಯವಹರಿಸಿ ನಾನು ಮಾರುವುದೆಲ್ಲಾ ಅವನಿಗೇ ಸೇರಲಿ ಎಂಬುದೇ ಅವರ ಭಾವನೆ. ಭಗವಾನ್ ರಾಮಕೃಷ್ಣ ಪರಮ ಹಂಸರು ಹೀಗೆ ಅಂದಿರುವರು.—"ಮನುಷ್ಯನಿಗೆ ಎಂದೂ ಕರ್ಮ ತಪ್ಪಿದ್ದಲ್ಲ. ಒಲ್ಲೆ ಎಂದರೂ ಪ್ರಕೃತಿ ಕರ್ಮಕ್ಕೆಳೆಯುವುದು; ಅಂದ ಮೇಲೆ ಮಾಡುವ ಕೆಲಸವನ್ನೆಲ್ಲಾ ಅನಾಸಕ್ತಿಯಿಂದ ಮಾಡಿದರೆ ಅದು ಪರಕ್ಕೆ ಸಾಧನವಾಗುವುದು. ಇಂಥ ಕೆಲಸವನ್ನು ಮಾತ್ರ ಎಳ್ಳಷ್ಟೂ ಫಲದಾಸೆಯಿಲ್ಲದೆ ಮಾಡುವುದು ಉಚಿತ," ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಹೇಳಿರುವ ಪ್ರಸಿದ್ಧ ಶ್ಲೋಕವಾದರೂ ಇದೇ ಅಭಿಪ್ರಾಯ ಹೊರಗೆಡ ವುತ್ತದೆ.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ।
ಮಾ ಕರ್ಮ ಫಲಹೇತು ರ್ಭೂರ್ಮಾಗತೇ ಸಂಗೋಽಸ್ತ್ವಕರ್ಮಣಿ॥

ವಿಹಿತ ಕರ್ಮವನ್ನು ಮಾಡುವುದರಲ್ಲಿಯೇ ನಿನಗೆ ಅಧಿಕಾರವು. ಫಲಗಳನ್ನು ಆಲೋಚಿಸುವುದರಲ್ಲಿಯೂ ಯಾವಾಗ್ಯೂ ಅಧಿಕಾರವಿಲ್ಲ. ಫಲವನ್ನೇ ನಿಮಿತ್ತ ಮಾಡಿ ಕರ್ಮಮಾಡತಕ್ಕವನಾಗಬೇಡ. ಹಾಗೂ ಕರ್ಮವನ್ನು ಬಿಡುವುದರಲ್ಲಿಯೂ ನಿನಗೆ ಆಸಕ್ತಿ ಬರಬಾರದು. ಈ ದೃಷ್ಟಿಯಿಂದಲೇ ಬಸವೇಶ್ವರನು ಈ ವಚನವನ್ನು ಅಂದಿರುವನು. ಜೀವಿಯ ಆತ್ಮಶುದ್ಧಿ, ಬಾಹ್ಯಶುದ್ಧಿಗಳನ್ನು ಮಾಡಿ, ಸುಟ್ಟ ಬಂಗಾರದಂತೆ ಪರಿಶುದ್ಧೀಕರಿಸಿ ಆತ್ಮ ಸಾಕ್ಷಾತ್ಕಾರದ ಸ್ಥಿತಿಗೆ ತಂದು ಬಿಡುವ ಗುರುವನ್ನು ಗೌರವಿಸುವುದೂ ತನ್ನದೆಲ್ಲವನ್ನೂ ಗುರುಸೇವೆಗೆ ಅರ್ಪಿಸುವುದೂ ನ್ಯಾಯವಾಗಿದೆ. ಹಾಗೆಯೇ ಪರಮಾತ್ಮನನ್ನು ಆರಾಧಿಸಬೇಕು. ಜಗತ್ತಿನ ಧರ್ಮ ರಹಸ್ಯವನ್ನು ತಿಳಿದು, ಪರಮಾತ್ಮನನ್ನು ಕಂಡು ನಿಜಾನಂದದಲ್ಲಿ ಮುಳುಗಿದ ಮಹಾ ಪುರುಷರ ಮುಂದೆಯೂ ಜಗತ್ತು ತಲೆಬಾಗಲೇಬೇಕು. ಈ ಎಲ್ಲ ಭಾವಗಳನ್ನು ಬಸವೇಶ್ವರನು ಅನುಭವಿಸಿ, ಅದರಂತೆ ಆಚರಿಸಿ, ತನ್ನದೆಂಬುದನ್ನೆಲ್ಲಾ ಪರರಿಗೆ ಅರ್ಪಿಸಿ ಅವರನ್ನು ಸೇವಿಸಿ ಈ ರೀತಿ ನುಡಿದಿರುತ್ತಾನೆ.

"ಲಿಂಗಾಂಗ ಸಾಮರಸ್ಯದ ಮಹತ್ವದ ಸ್ಥಿತಿಗೆ ಜೀವವನ್ನು ಒಯ್ಯಲು ಯೋಗ್ಯರಾದ ಗುರುಗಳ ಚರಣ ಸೇವೆಗೋಸ್ಕರ ನಾನು ಕೆಲಸ ಮಾಡುತ್ತೇನೆ. ನನ್ನ ಎಲ್ಲ ವ್ಯವಹಾರಗಳೂ ಪರಮಾತ್ಮನ ಸೇವೆಗಾಗಿಯೇ ಇರುತ್ತವೆ. ನಾನು ಇತರರ ಸೇವೆ ಮಾಡುವುದೂ ಜ್ಞಾನಿಗಳಾದವರನ್ನು ಪೂಜಿಸಿ ಅವರನ್ನು ದಾಸ ಭಾವದಿಂದ ಪೂಜಿಸುವುದಕ್ಕಾಗಿಯೇ ನಾನು ಮಾಡುವ ಕರ್ಮಫಲಕ್ಕೆಲ್ಲಾ ಪರಮಾತ್ಮನಾದ ನೀನೇ ಕಾರಣೀಭೂತನು. ನಿನಗೆ ಸೇರಿದ ಜಗತ್ತಿನ ಐಶ್ವರ್ಯದ ಭಾಗವನ್ನು ನಿನ್ನ ಸೇವೆಗೆ ಅರ್ಪಿಸಿರುವನೇ ಹೊರತು ಬೇರೆ ಕೆಲಸವನ್ನು ಮಾಡಿರುವುದಿಲ್ಲ. ನಿನ್ನದನ್ನು ನಿನಗೆ ನಿನ್ನಾಣೆಯಾಗಿಯೂ ಅರ್ಪಿಸಿರುವೆನು—ಎಂದು ತನ್ನ ಕಾಯಕದ ಮಹತ್ವವನ್ನು ಅದರ ರೀತಿಯನ್ನು ಹೊರಗೆಡವಿರುತ್ತಾನೆ.

# ವೈರಾಗ್ಯ

— ವ್ಹಿ. ಚಂದ್ರಶೇಖರ. ಬಿ. ಎ. ಬಿ. ಎಡ್.,
ದಾವಣಗೆರೆ.

ಪ್ರಪಂಚದಲ್ಲಿ ಕೇವಲ ಕೈ ಬೆರಳ ಮೇಲೆ ಎಣಿಸುವ ಐದು ವಿಷಯುಗಳಿವೆ. ಅವು ಶಬ್ದ. ಸ್ಪರ್ಶ. ರೂಪ. ಗಂಧ. ಅವುಗಳು ಮಾನವನ ಪುಣ್ಯ ಪಾಪಕ್ಕನು ಗುಣವಾಗಿ ಹೆಣ್ಣು. ಹೊನ್ನು ಮಣ್ಣಿನ ರೂಪದಲ್ಲಿ ಪ್ರಾಪ್ತವಾಗಿ ಸುಖ–ದುಃಖಗಳನ್ನುಂಟುಮಾಡಿ ಕಣ್ಮರೆಯಾಗುತ್ತವೆ. ಅಜ್ಞಾನಿಯಾದ ಮಾನವ ಜೀವಿಯು ಅವುಗಳ ಸ್ವರೂಪವನ್ನು ವಿಚಾರಿಸದೆ ಅಸ್ಥಿಶುನಕ ನ್ಯಾಯದಂತೆ ಅವುಗಳ ತೃಪ್ತಿಗಾಗಿ ಬೆಳಗಿನಿಂದ ಸಂಜೆಯುವರೆಗೂ ದೇಹರಕ್ಷಣೆಗಾಗಿಯೇ ದುಡಿಯುವ ಮಾನವನು ಭೋಗ ಭಾಗ್ಯಗಳನ್ನು ಯಥೇಚ್ಛವಾಗಿ ಗಳಿಸುತ್ತಿರುವನು. ಮಾನವನು ತನ್ನ ಜೀವನದ ಮುಖ್ಯ ಉದ್ದೇಶವಾದ ಪರಮ ಪುರುಷಾರ್ಥಗಳನ್ನು ಕುರಿತು "ತರೋಣ, ತರೋಣ ತಿಂಬೋಣ, ಮಲಗೋಣ" ಇವುಗಳನ್ನೇ ಬಾಳಿನ ಸರ್ವಸ್ವವೆಂದು ತಿಳಿದು ವ್ಯರ್ಥ ಜೀವನಗೈಯುತ್ತಿದ್ದಾನೆ

ಇಂಥ ನಿತ್ಯಾನಿತ್ಯ ವಸ್ತು ವಿವೇಕವಿಲ್ಲದೆ. ಅಜ್ಞಾನ ಮೂಲವಾಗಿ ಇಹ ಪರ ಲೋಕಗಳ ವಿಷಯುಗಳು ಹಾಗೂ ಅವುಗಳ ಭೋಗಗಳು ನಿತ್ಯವಾಗಿದೆ. ಮತ್ತು ಸುಖ ರೂಪವಾಗಿವೆ ಎಂದು ತಿಳಿದು ಅವುಗಳನ್ನು ಭೋಗಿಸಲಿಚ್ಚಿಸುವುದು ''ರಾಗ'' ಇವುಗಳ ಭೋಗವನ್ನು ಬಿಡುವುದು "ವಿರಾಗ" ವೆಂದನಿಸುವುದು. "ರಾಗವಿಲ್ಲದುದು ವಿರಾಗ ಅನುವೇ ವೈರಾಗ್ಯ" ಬಸವಣ್ಣನವರು "ಒಲ್ಲೆನೆಂಬುದೇ ವೈರಾಗ್ಯ. ಒಲಿವೆನೆಂಬುದೇ ಕಾಯುಗುಣ" ವೆಂದರು.

ಆದರೆ ಇಂದಿನ ಸಮಾಜದಲ್ಲಿ ಆಷಾಡ ಭೂತಿಗಳೇ ಹೆಚ್ಚುತಲಿದ್ದಾರೆ. ವೈರಾಗ್ಯ ವೈರಾಗ್ಯ ದ ನೆಪದಲ್ಲಿ ಸಮಾಜದ ನೈತಿಕ ಮಟ್ಟವನ್ನು ಪಾತಾಳಕ್ಕೆ ಇಳಿಸುತ್ತಿದ್ದಾರೆ.

ಇವರು ಕೇವಲ ಬಾಹ್ಯ ವೈರಾಗಿಗಳು. ನಿತ್ಯಾನಿತ್ಯದ ವಸ್ತು ವಿವೇಕದ ಅರಿವಿಲ್ಲದೆ. ಇಹ–ಫಲ ಭೋಗವನ್ನು ತೊರೆಯದೆ ಬಹಿರಂಗದಲ್ಲಿ ವೈರಾಗ್ಯದ ಹೆಸರಿನಲ್ಲಿ ಉದರ ವೈರಾಗ್ಯ ಮಾಡುತ್ತಿದ್ದಾರೆ.

ಹಲವು ವೇಷಗಳನ್ನು ಧರಿಸಿ ನುಣ್ಣಗೆ. ತಲೆಯನ್ನು ಬೋಳಿಸಿ ಇಲ್ಲವೆ ಕೇಶಧಾರಿಯಾಗಿ, ಹಣೆಯಲ್ಲಿ ವಿಭೂತಿಧರಿಸಿ ರುದ್ರಾಕ್ಷಿಯಿಂದ ಅಲಂಕರಿಸಿ ಕಾವಿ ಲಾಂಛನ ಧಾರಿಯಾಗಿರುವುದು. ತನುವಿನ ಆಶೆ–ಆಮಿಷ ಹಿಂಗವಾಗಿ ಊರಾಶ್ರಮ ಬಿಟ್ಟು

ಕಾಡಾಶ್ರಮಗಳಾಗಿ, ವಸ್ತ್ರತ್ಯಾಗಮಾಡಿ ದಿಗಂಬರನಾಗಿದ್ದು. ಕಂದಮೂಲಾದಿಗಳನ
ತಿನ್ನುತ್ತಾ ಇಲ್ಲವೆ ಭಿಕ್ಷಾಟನೆ ಮಾಡುವುದು. ಉಪವಾಸ-ಮೌನಗಳನ್ನು ಆಚ
ಸುವುದು. ಕೈಯಲ್ಲಿ ಜಪಮಣಿ ಹಿಡಿದು ಬಾಯಲಿ ಮಂತ್ರ ಉಚ್ಚರಿಸುತ್ತ ವೈರಾಗ್ಯ
ವೇಷಧರಿಸಿ ಮನದಲ್ಲಿ ಪರಸತಿಪರಧನತೆ ಚಿಂತಿಸುವ ಬಾಹ್ಯ ವೈರಾಗ್ಯಿಗಳು "ಅಂ
ರಂಗಸಂಗ ಬಹಿರಂಗದ ನಿಸ್ಸಂಗ' ಇಂಥ ವೈರಾಗ್ಯದಿಂದ ಯಾವ ಪ್ರಯೋಜನವಾ
ಲಾರದು.

ಅರಿದು ವನಿತಾದಿ ವಿಷಯದೊಳುಳ್ಳ ದೋಷವನು
ತೊರೆದು ಮರಳಿ ಮೋಹಿಸದ ಛಲಿಯಾಗಿ
ಕೊರತೆಯಿಲ್ಲದ ಶಂಭುಲಿಂಗದಂತಿರೆ ಭೋಗದಂತೆ
ಮಿಲ್ಲುದುದೀಗ ಪರಮ ವೈರಾಗ್ಯ
ತೊರೆದುಪರಲ್ಲಿ ಮತ್ತೆರಗದಿಹುದೇ ಚಂದ

—ನಿಜಗುಣ ಶಿವಯೋ

ಸಂಸಾರದಲ್ಲಿದ್ದು ಸಂಸಾರ ತನ್ನೊಳಗಿಲ್ಲದಿರುವುದು ಹಡಗು ನೀರಿನಲ್ಲಿದ್ದು ನೀ
ಹಡಗಿನಲ್ಲಿರದಂತೆ ವನಿತಾದಿ ವಿಷಯಗಳ ಅರಿತು. ಅವುಗಳ ದೋಷಗಳನ್ನು ಅರಿ
ವಿಷಯಗಳನ್ನು ದೈಹಿಕವಾಗಿ ತ್ಯಜಿಸದೆ ಅವುಗಳ ಮಧ್ಯದಲ್ಲೇ ಇದ್ದುಕೊಂಡು ಅವುಗ
ಮೇಲೆ ಉದಾಸೀನದಿಂದ ಇರುವುದು. ಇದು "ಬಹಿರಂಗದ ಸಂಗ ಅಂತರಂಗ
ನಿಸ್ಸಂಗ' ಮನಸಾ ಸಂನ್ಯಸ್ತಾ" ಎನ್ನುವಂತೆ.

ಮುಂಡೆ ಬೋಳಾದೊಡೇನು ಮನ ಬೋಳಾಗದನ್ನಕ್ಕ
ಮನ ವಿರಕ್ತಿಗೆ ಮುಕ್ತಿಯಿಲ್ಲದೆ ತನುವಿರಕ್ತಿಯೇ ಮುಕ್ತಿಯೇ'

ಎನ್ನುತ್ತಾರೆ ನಿಜಗುಣ ಶಿವಯೋಗಿಗಳು.

ವನಿತಾದಿ ದೋಷ ದರುಶನವೇ ನಿಮಿತ್ತ
ಆವ ಅನುಬಂಧವನು ಬಿಡುವುದು ರೂಪು
ಬಳಿಕ ಮನವತ್ತಲೆರಗದಾ ನಿಷ್ಠೆಯದು ಕಾರ್ಯ
ವೆಂದನುತ ಜಗೆವುದು ವಿರಾಗತೆಗೆ ನೆಲೆಯೆಂದು

—ನಿಜಗುಣ ಶಿವಯೋ

(ವೃಕ್ಷದ)ಮರದ ಉದಯಕ್ಕೆ ಹೇಗೆ ಬೀಜವು ಕಾರಣವಾಗಿದೆ. ಹಾಗೆ ರೆಂಬೆ. ಎಲೆ
ಹೂಗಳಿಂದ ಪಸರಿಸುವುದು ರೂಪವಾಗಿದೆ. ಅನಂತರದ ಕಾರ್ಯ ಫಲಬಿಡುವುದಾಗಿದೆ
ಅದರಂತೆ ವೈರಾಗ್ಯ ವೃಕ್ಷಕ್ಕೆ ವನಿತಾದಿಗಳಲ್ಲಿ ಅನಿತ್ಯ. ಅಶುಚಿ. ದುಃಖ ದೋ

(49 ನೇ ಪುಟ ನೋಡಿ

# ಚಿಕ್ಕ ವಸ್ತು ಸಂಗ್ರಹಾಲಯಗಳು ಹಾಗೂ ಅವುಗಳ ಮಹತ್ವ

— ಕೆಳದಿ ಗುಂಡಾಜೋಯಿಸ್
ಗೌರವ ಕ್ಯೂರೇಟರ್ ಮತ್ತು ನಿರ್ದೇಶಕರು, ಕೆಳದಿ ಮ್ಯೂಸಿಯಂ, ಕೆಳದಿ.

ವಸ್ತುಗಳ ಮಹತ್ವವನ್ನು ಅವುಗಳ ದೃಷ್ಟಿಕೋನದಲ್ಲಿ ಸಮೀಕ್ಷಿಸಿ, ಅದರ ಪ್ರಖರತೆಗಳನ್ನು ಪ್ರತಿಬಿಂಬಿಸುವಲ್ಲಿ ವಸ್ತು ಸಂಗ್ರಹಾಲಯವು ಪ್ರಮುಖ ಜ್ಞಾನದೀವಿಗೆಯ ತಾಣವಾಗಿದೆ. ವಿಶ್ವದ ವಿವಿದೆಡೆಗಳಲ್ಲಿ ಸಂಗ್ರಹಾಲಯಗಳು ಇವುಗಳನ್ನು ಗುರುತಿಸಿ, ದೊಡ್ಡ ದೊಡ್ಡ ಕಟ್ಟಡಗಳಲ್ಲಿ ಶೇಖರಿಸಿ ಪ್ರದರ್ಶಿಸಿರುವಂತೆ, ಚಿಕ್ಕ ವಸ್ತು ಸಂಗ್ರಹಾಲಯಗಳೂ ತನ್ನದೇ ಆದ ನೈತಿಕ ಮೌಲ್ಯಗಳನ್ನೂ, ಸಾಂಸ್ಕೃತಿಕ ಸಂಪತ್ತು ಹಾಗೂ ವೈಶಿಷ್ಟ್ಯತೆಯನ್ನು ಹೊಂದಿರುವುದರಿಂದ ಇವುಗಳನ್ನು ರಕ್ಷಿಸಿ, ಕಾಪಾಡಿಕೊಂಡು ಬರುವುದು ಅಗತ್ಯ.

ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ವಸ್ತುಸಂಗ್ರಹಾಲಯುವನ್ನು ಯಶಸ್ವಿಯಾಗಿ ಸ್ಥಾಪಿಸಿ, ಪೋಷಿಸಿ ಬೆಳೆಸಿಕೊಂಡು ಬರುವ ಸ್ಥಾನದಲ್ಲಿ ಭಾರತಕ್ಕೆ ಇರುವಷ್ಟು ಅವಕಾಶಗಳು ಬೇರೆಲ್ಲೂ ದೊರೆಯಲಾರವೆಂದು ಹೇಳಬಹುದು. ವಸ್ತು ಸಂಗ್ರಹಾಲಯವನ್ನು ದೊಡ್ಡ ದೊಡ್ಡ ನಗರದಲ್ಲಿ ಸ್ಥಾಪಿಸಿ, ಬೆಳೆಸುವುದು ಎಷ್ಟು ಸೂಕ್ತವೋ, ಚಿಕ್ಕ ಹಳ್ಳಿಯ ವಸ್ತು ಸಂಗ್ರಹಾಲಯಗಳನ್ನೂ ವಿವಿಧ ಕಾರಣಗಳಿಂದ ಅವುಗಳ ಸ್ಥಾಪನೆ ಹಾಗೂ ಅಭಿವೃದ್ಧಿಪಡಿಸುವುದೂ ಅಷ್ಟೇ ಮಹತ್ವವಾಗಿದೆ.

ರಾಷ್ಟ್ರೀಯ ಸಂಸ್ಕೃತಿ ಸಂಪತ್ತೆನಿಸಿದ ವಿವಿಧ ವಸ್ತುಗಳು, ಭಾರತದ ವಿವಿದೆಡೆಗಳಲ್ಲಿ, ವಿವಿಧ ವೈಚಿತ್ರ್ಯತೆಗಳನ್ನು ಹೊಂದಿ ಹೇರಳವಾಗಿ ಉಪಲಬ್ಧವಿರುತ್ತವೆ, ಇವುಗಳನ್ನು ಗುರುತಿಸಿ ಆಯಾ ದೇಶಗಳಲ್ಲಿರುವ ವಸ್ತುಸಂಗ್ರಹಾಲಯಗಳಲ್ಲಿ ಸೂಕ್ತ ರೀತಿಯಲ್ಲಿ ಪ್ರದರ್ಶಿಸುವುದು ಅಗತ್ಯ. ಈ ಭಾಗದಲ್ಲಿ ಚಿಕ್ಕ ವಸ್ತುಸಂಗ್ರಹಾಲಯಗಳು ಬಹು ಮಹತ್ವದ ಪಾತ್ರವನ್ನು ವಹಿಸಬಲ್ಲವಾಗಿವೆ ಖಾಸಗೀ ಸಂಗ್ರಹಗಳು ಭಾರತದಲ್ಲಿ ಗಮನಾರ್ಹ ರೀತಿಯಲ್ಲಿ ಆಸಕ್ತಿಯಿಂದಲೂ ಹಾಗೂ ಅಧ್ಯಯನ ರೂಪದಲ್ಲಿಯೂ ಸಂಗ್ರಹಣೆ ಹಾಗೂ ಸಂಶೋಧನೆ ನಡೆಸುತ್ತಿರುವುದು ಶುಭ ಸಂಕೇತವಾಗಿದೆ. ಚಿಕ್ಕ ವಸ್ತುಸಂಗ್ರಹಾಲಯಗಳು ಹಾಗೂ ಪ್ರಾದೇಶಿಕ ಸಂಗ್ರಹಾಲಯಗಳ ಅರ್ಥವ್ಯಾಪ್ತಿ ಮತ್ತು ಅಧ್ಯಯನವನ್ನು ಇಲ್ಲಿ ತುಸುಮಟ್ಟಿಗೆ ವಿಶ್ಲೇಶಿಸುವುದು ಅಗತ್ಯವೆನಿಸಿದೆ.

ವಸ್ತುಸಂಗ್ರಹಾಲಯ ತಜ್ಞರು ಸ್ಥೂಲವಾಗಿ ಈ ಕೆಳಕಂಡಂತೆ ವಸ್ತುಸಂಗ್ರಹಾಲಯಗಳ ಶೇಖರಣೆಯನ್ನು ವಿಭಾಜಿಸಿದ್ದಾರೆ.

೧. ರಾಷ್ಟ್ರೀಯ ಸಂಪತ್ತು.
೨. ಪ್ರಾಮುಖ್ಯವಾದ ಸಾಂಸ್ಕೃತಿಕ ಸಂಪತ್ತು.
೩. ಸಾಮಾನ್ಯ ಪ್ರಾಮುಖ್ಯತೆಯಿರುವ ಸಾಂಸ್ಕೃತಿಕ ಪರಂಪರೆಯ ವಸ್ತುಗಳು.
೪. ಸ್ವಾಭಾವಿಕ ಸಾಂಸ್ಕೃತಿಕ ಸಂಪತ್ತುಗಳು.
೫. ಪ್ರಾದೇಶಿಕ ಸಾಂಸ್ಕೃತಿಕ ಸಂಪತ್ತುಗಳು.

ಸುಪ್ರಸಿದ್ಧ ದೇವಾಲಯಗಳು, ಕೋಟೆಗಳು, ಜಲಾವಾಸಸ್ಥಾನಗಳು, ಮಸೀದಿಗಳು, ಪ್ರಾಕೃತಿಕ ಅದ್ಭುತಗಳು, ಪ್ರಾಕೃತಿಕ ಅವಶೇಷಗಳು, ಪ್ರಾಕೃತಿಕ ವೈಚಿತ್ರ್ಯತೆಗಳು, ಸುಂದರ ತಾಣಗಳು–ಇತ್ಯಾದಿ ಇವುಗಳು ಸ್ವಾಭಾವಿಕವಾಗಿಯೇ ವಸ್ತುಸಂಗ್ರಹಾಲಯಗಳಾಗಿದ್ದು ರಾಷ್ಟ್ರೀಯ ಸಂಪತ್ತುಗಳೆನಿಸಿವೆ. ಇವುಗಳಲ್ಲಿ ಹಲವು ಅಂತರರಾಷ್ಟ್ರೀಯ ಸಂಪತ್ತುಗಳೆಂದು ಪರಿಗಣಿಸಲ್ಪಟ್ಟಿವೆ. ಅಪೂರ್ವವೂ ಹಾಗೂ ವಿವಿಧ ವೈಚಿತ್ರ್ಯತೆಗಳನ್ನು ಪಡೆದಿರುವ ವಸ್ತುಗಳು ಆಯಾ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುವಂತೆ ಗೋಚರಿಸುವ ವಸ್ತುಗಳನ್ನು ಎರಡನೆಯ ಗುಂಪಿಗೆ ಸೇರಿಸಬಹುದಾಗಿದೆ. ಬ್ರಿಟಿಷ್ ಮ್ಯೂಜಿಯಂನಲ್ಲಿ ದೊರಕುವ ಮಯೂರ ಸಿಂಹಾಸನಗಳು, ರಾಜಮಹಾರಾಜರ ಅವಶೇಷಗಳು ಇತ್ಯಾದಿ–ಇವುಗಳನ್ನು ಈ ಸಾಲಿಗೆ ಉದಹರಿಸಬಹುದು. ಸಾಮಾನ್ಯ ಪ್ರಾಮುಖ್ಯತೆಯನ್ನು ಹೊಂದಿ ಸಾಂಸ್ಕೃತಿಕ ಪರಂಪರೆಯಿಂದ ಕೂಡಿರುವ ವಸ್ತುಗಳು ಐತಿಹಾಸಿಕ, ಸಾಮಾಜಿಕ ಹಾಗೂ ತಾತ್ವಿಕ ಹಿನ್ನೆಲೆಯನ್ನು ಅರಿಯಲು ಉಪಯೋಗಕರವಾಗುತ್ತವೆ. ಜನಜೀವನದ ಹಿನ್ನೆಲೆಯನ್ನು ರೂಪಿಸುವ ಜಾನಪದ ಸಂಗ್ರಹಗಳನ್ನು ಈ ಮಾಲೆಗೆ ಉದಾಹರಿಸಬಹುದಾಗಿದೆ. ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ಇವುಗಳು ಮಹತ್ವಪೂರ್ಣ ಬೆಳಕನ್ನು ಚೆಲ್ಲಲಿರುವುದರಿಂದ ಇಂತಹವುಗಳನ್ನು ಕಡೆಗಣಿಸುವಂತಿಲ್ಲ. ನಾಲ್ಕನೆಯದಾಗಿ ಹೇಳಿದ ಸ್ವಾಭಾವಿಕ ಸಾಂಸ್ಕೃತಿಕ ಸಂಪತ್ತುಗಳು ಅವುಗಳ ವಿಶ್ಲೇಷಣೆಯಲ್ಲಿ ಮೊದಲನೆಯ ಭಾಗದಲ್ಲಿ ಹೇಳಿದಂತೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಂಪತ್ತುಗಳು ಅಲ್ಲದೆ, ಆಯಾ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಚಿತ್ರಿಸುವ ಮುಖಾಂತರ ದೊರಕಿದ ಎಲ್ಲ ವಸ್ತುಗಳೂ ಈ ಮಾಲೆಯಲ್ಲಿ ಪರಿಗಣಿಸಲ್ಪಟ್ಟಿವೆ ಭಾರತದ ದೃಷ್ಟಿಯಲ್ಲಿ ಬೇಲೂರು, ಹಳೆಯಬೀಡು, ವಿಜಯನಗರ ಇತ್ಯಾದಿಗಳನ್ನು ಈ ಮಾಲೆಯಲ್ಲಿ ಉದಹರಿಸಬಹುದು.

ಪ್ರಾದೇಶಿಕ ಸಾಂಸ್ಕೃತಿಕ ಸಂಪತ್ತುಗಳ ವ್ಯಾಖ್ಯೆಯಲ್ಲಿ ಆಯಾ ಪ್ರಾಂತದ ಅಥವಾ ಪ್ರದೇಶಗಳ ವೈಜ್ಞಾನಿಕ, ನೈಸರ್ಗಿಕ ಹಾಗೂ ಸಾಂಸ್ಕೃತಿಕ ಪರಂಪರೆಯ ಸಂಗ್ರಹಣೆಗಳು ಬರುತ್ತವೆ. ಚಿಕ್ಕ ವಸ್ತುಸಂಗ್ರಹಾಲಯಗಳ ಅರ್ಥವ್ಯಾಪ್ತಿಯು ಇದಕ್ಕೆ ಅನ್ವಯವಾಗುತ್ತದೆ.

ಚಿಕ್ಕ ವಸ್ತುಸಂಗ್ರಹಾಲಯಗಳು: ಸ್ವಾಭಾವಿಕ ಹಾಗೂ ವಸ್ತು ನಿರ್ದಿಷ್ಟ ರೂಪಗಳನ್ನು ಚಿತ್ರಿಸುವಲ್ಲಿ ಖಾಸಗೀ ಚಿಕ್ಕ ವಸ್ತುಸಂಗ್ರಹಾಲಯಗಳ ಪಾತ್ರವು ಹೆಚ್ಚಿದು. ಈ ಸಂಗ್ರಹವು ಸ್ವಾಭಾವಿಕ ಚಾರಿತ್ರಿಕ ಹಿನ್ನೆಲೆಯೂ. ವಿವಿಧ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ವರೂಪವೂ, ಪ್ರಾಚ್ಯ ಅವಶೇಷ ವಸ್ತುಗಳೇ ನೈಸರ್ಗಿಕ ಸಂಗ್ರಹಗಳು, ವೈಜ್ಞಾನಿಕ ಕಲೆಗಳೂ ಇತ್ಯಾದಿ ಹೀಗೆ ವಿವಿಧ ಹಂತಗಳ ರೂಪದಲ್ಲಿ ರಚಿಸಬಹುದಾಗಿವೆ.

ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿ ರಚಿಸಿದ ಸಂಗ್ರಹಾಲಯಗಳು ಆಯಾ ಪ್ರದೇಶದ ಐತಿಹಾಸಿಕ ಸಂಗತಿಗಳನ್ನು ಚಿತ್ರಿಸುವಲ್ಲಿ ಗಣನೀಯ ಪಾತ್ರವನ್ನು ನಿರ್ವಹಿಸಬಲ್ಲವು. ಸುಮಾರು ಆರುನೂರು ಸಂಸ್ಥಾನಗಳನ್ನು ಪಡೆದ ಭಾರತದಲ್ಲಿ ಇಂತಹ ಸಂಗ್ರಹಗಳು ವೈಚಾರಿಕತೆ ಹಾಗೂ ಚಾರಿತ್ರಿಕ ಅಂಶಗಳನ್ನು ಅಧ್ಯಯನದ ಮುಖಾಂತರ ಬೆಳಕಿಗೆ ತರಬಲ್ಲವು. ಇದೀಗ ಇಂತಹ ವಸ್ತುಸಂಗ್ರಹಾಲಯಗಳ ಸ್ಥಾಪನೆಯಲ್ಲಿ ಹಲವು ಪ್ರಯತ್ನಗಳು ನಡೆಯುತ್ತಿರುವುದು ಶುಭೋದಯ ಸಂಕೇತವಾಗಿದೆ. ವಿದೇಶಗಳಲ್ಲಿ ಈ ಬಗೆಯ ವಸ್ತುಸಂಗ್ರಹಾಲಯಗಳಿಗೆ ಸರಕಾರದ ಹಾಗೂ ಸಾರ್ವಜನಿಕರ ಪ್ರೋತ್ಸಾಹವು ಹೇರಳವಾಗಿ ಸಿಕ್ಕುತ್ತಿದೆ. ಕರ್ನಾಟಕದಲ್ಲಿನ ಹಲವಾರು ಇಂತಹ ಪ್ರಾಚ್ಯ ವಸ್ತುಸಂಗ್ರಹಾಲಯಗಳು ಚಾರಿತ್ರಿಕ ಹಾಗೂ ಕಾವ್ಯ ಸಾಹಿತ್ಯದ ಹಿನ್ನೆಲೆಯನ್ನು ಅರಿಯಲು ಅಧ್ಯಯನ ಹಾಗೂ ಸಂಶೋಧನೆಗೆ ಅರ್ಹವಾಗಿವೆ. ಈ ವಸ್ತುಸಂಗ್ರಹಾಲಯಗಳು ಕೇವಲ ವಸ್ತುಗಳನ್ನು ಶೇಖರಿಸುವುದಷ್ಟನ್ನೇ ಪ್ರಾಮುಖ್ಯವಾಗಿ ಪರಿಗಣಿಸಿದೆ ಅವುಗಳ ಸಂಶೋಧನೆಗೂ ಹೆಚ್ಚಿನ ಗಮನವನ್ನು ಕೊಟ್ಟಿರುವುದೂ ಗಣನೀಯ ಅಂಶಗಳಲ್ಲೊಂದು. ಸಂಗ್ರಹಾಲಯದ ಸ್ಥಾಪಕರು ಸಂಶೋಧಕರೂ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಅರಿತವರೂ ಮತ್ತು ಅಪಾರ ಆಸಕ್ತಿಯನ್ನು ಹೊಂದಿದವರೂ ಆಗಿದ್ದರೆ ಇದಕ್ಕೆ ಪುಷ್ಟಿ ನೀಡಿದಂತಾಗುತ್ತದೆ. ಇಂತಹ ವಿವಿಧ ಸಂಗ್ರಹಾಲಯಗಳನ್ನು ವಿದೇಶಗಳಲ್ಲಿ ಪ್ರೋತ್ಸಾಹಿಸಲಾಗುತ್ತಿದೆ. ಖಾಸಗೀ ಸಂಗ್ರಹಗಳು ಕೇವಲ ತಮ್ಮ ಪ್ರದೇಶದಲ್ಲಿಯೇ ಅಧ್ಯಯನಕ್ಕಾಗಿ ಸೀಮಿತಗೊಳ್ಳದೆ, ಇತರೆಡೆಗಳಲ್ಲಿಯೂ ವಿಸ್ತರಿಸುವುದರಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸುತ್ತವೆ. ಉತ್ತರ ಪ್ರದೇಶ ಸರಕಾರವು ಪ್ರೋತ್ಸಾಹ ನೀಡಿದ ಬೃಂದಾವನದಲ್ಲಿನ ಖಾಸಗೀ ವಸ್ತುಸಂಗ್ರಹಾಲಯವು ಈ ರೀತಿಯ ನಿದರ್ಶನಗಳಲ್ಲಿ (ಭಾರತದಲ್ಲಿ) ಒಂದೆನಿಸಿದೆ. ಕರ್ನಾಟಕದಲ್ಲಿಯೂ ಈ ನಿಟ್ಟಿನಲ್ಲಿ ಗಮನವನ್ನು ಹರಿಸಿ, ಇವುಗಳನ್ನು ಗುರುತಿಸಿ ಪ್ರೋತ್ಸಾಹಿಸುವುದು ಕರ್ನಾಟಕ ಸಂಸ್ಕೃತಿ ರಕ್ಷಣೆಯಲ್ಲಿ ಅಗತ್ಯವೆನಿಸಿದೆ.

ತೆರೆದ ನಿವೇಶನ ಸಂಗ್ರಹಾಲಯಗಳು: ಆಯಾ ಪ್ರದೇಶದ ಸಾಂಸ್ಕೃತಿಕ ಅವಶೇಷಗಳು ಹಾಗೂ ಸಂಪತ್ತುಗಳನ್ನು ಪ್ರಾಮುಖ್ಯ ಸ್ಥಳಗಳಲ್ಲಿ ಸಂಗ್ರಹಿಸಿ ವ್ಯವ

ಸ್ಥಿತವಾಗಿ ಶೇಖರಿಸಿಡುವುದು ಇದರ ಪ್ರಮುಖ ಉದ್ದೇಶ. ವಸ್ತುಸಂಗ್ರಹಾಲ
ತಜ್ಞರು ಕೈಗೊಂಡಿರುವ ಈ ಕಾರ್ಯವು ಈಗ ಅಗತ್ಯವಾಗಿ ನಡೆಯಬೇಕಾಗಿ
ಹಂಪೆ, ಹಳೆಯಬೀಡು ಮುಂತಾದ ಕಡೆಗಳಲ್ಲಿ ನಡೆದಿರುವ ಇಂತಹ ಪ್ರಯೋಗಗ
ಗಮನಾರ್ಹವಾಗಿ ಯಶಸ್ವಿಯಾಗಿವೆ ಕರ್ನಾಟಕದಲ್ಲಿ ಮಲೆನಾಡಿನ ಕಾವಳ
ಪ. ಹಸೀಯ.ರೊಬ್ಬರು ಗುಲಾಬಿ ಗಿಡಗಳ ವಿವಿಧ ಸಂಗ್ರಹಗಳನ್ನು ಕಲೆಹಾಕಿದ್ದಾರೆಂ
ಕೇಳಿದ್ದೇನೆ. ಇದೂ ಗಮನಾರ್ಹವಾದುದು ಇಂತಹ ಪ್ರಾಚ್ಯ ಹಾಗೂ ಇತರೆ ವಿ
ಸಂಗ್ರಹಗಳನ್ನು ಗುರುತಿಸಿ ಪ್ರೋತ್ಸಾಹಿಸುವುದು ಆಕರ್ಷಣೆ ಹಾಗೂ ವಿದೇಶೀ ವಿ
ಮಯಗಳನ್ನು ಗಳಿಸಿಕೊಡಲು ಸಹಕಾರಿಯಾಗುತ್ತವೆ.

ಹಲವು ಆಸಕ್ತ ವಲಯಗಳು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಸಂ
ಹಾಲಯಗಳನ್ನು ನಡೆಸುತ್ತಿದ್ದಾರೆ. ಇಂತಹವುಗಳನ್ನು ಹಳ್ಳಿಗಳಲ್ಲಿ ವಿಶೇಷವಾ
ಗಮನಿಸಬಹುದು, ಭಾರತವು ಹಳ್ಳಿಗಳ ಆಗರ. ರೈತಾಪಿ ಜನಗಳು ಹಾಗ
ಗ್ರಾಮಾಂತರ ಪ್ರದೇಶದಲ್ಲಿನ ಸಾಮಾನ್ಯ ಬಡ ಜನರು ದೂರದ ಪಟ್ಟಣಗಳ
ತಮ್ಮ ಜ್ಞಾನಪಿಪಾಸೆಯನ್ನು ನೀಗಿಕೊಳ್ಳಲು ಹಾಗೂ ಮನೋರಂಜನೆಯನ್ನು ಪ
ಯಲು ವಸ್ತುಸಂಗ್ರಹಾಲಯಗಳನ್ನು ಸಂದರ್ಶಿಸುವುದು ಕಷ್ಟಕರವಾಗುತ್ತದೆ.
ಕಾರಣಗಳಿಂದ ಕನಿಷ್ಟಪಕ್ಷ ಜಿಲ್ಲೆಗೆ ಎರಡರಂತೆ ಇಂತಹ ಚಿಕ್ಕ ವಸ್ತುಸಂಗ್ರಹಾಲಯ
ಗಳನ್ನು ಪ್ರೋತ್ಸಾಹಿಸಿ ಬೆಳೆಸುವುದು ಅಗತ್ಯ. ಇದೂ ಅಲ್ಲದೆ ಪಟ್ಟಣದಲ್ಲಿಯೂ ಹ
ವರು ಖಾಸಗಿಯಾಗಿ ಅಪರೂಪ ವಸ್ತುಗಳನ್ನು ಸಂಗ್ರಹಿಸುವುದೂ ಕಂಡುಬರುತ್ತ
ದಕ್ಷಿಣ ಕನ್ನಡ ಜಿಲ್ಲೆಯ ಮಹನೀಯರೊಬ್ಬರು ನಾಣ್ಯಗಳನ್ನು ಕಲೆಹಾಕಿ, ಸಂಶೋ
ನೆಗೆ ಅವಕಾಶ ನೀಡುತ್ತಿರುವುದು, ಈ ನಿದರ್ಶನಗಳಿಗೆ ಉದಾಹರಿಸಬಹುದಾಗಿದೆ.

ಪ್ರಾಚೀನ ರಾಜಧಾನಿಗಳನ್ನು ಹಾಗೂ ವೈಭವಗಳನ್ನು ಸ್ಮರಿಸಲು ಅಂತಹ ಸ್ಥ
ಗಳಲ್ಲಿನ ಅವಶೇಷಗಳು ಮತ್ತು ಪ್ರಾಚ್ಯ ವಸ್ತುಗಳನ್ನು ಆ ರಾಜಧಾನಿಯಲ್ಲಿಯೇ ಕ
ಹಾಕಿ ತೆರೆದ ನಿವೇಶನ ಸಂಗ್ರಹಾಲಯಗಳನ್ನು ಭಾರತದ ಸಂಸ್ಕೃತಿಯ ಸಂರಕ್ಷಣೆಯ
ಅಂಗವಾಗಿ ರಕ್ಷಿಸುವುದು ಪ್ರಮುಖ ಕರ್ತವ್ಯವಾಗಿದೆ

ಹೀಗೆ ಎಲ್ಲ ರೀತಿಯಿಂದಲೂ ಚಿಕ್ಕ ವಸ್ತುಸಂಗ್ರಹಾಲಯಗಳು ರಾಷ್ಟ್ರೀಯ
ಸಂಗ್ರಹಾಲಯಗಳಿಗೆ ಮರದ ಕೊಂಬೆಯಂತೆ ಪರಿಪೋಷಣೆಗೆ ಅರ್ಹವಾಗಿವೆ. ಇವು
ಗಳನ್ನು ಸ್ವತಂತ್ರ ರೀತಿಯಲ್ಲಿ, ಅವುಗಳಿಗೆ ಸೀಮಿತ ಅಧಿಕಾರವಿತ್ತು ಬೆಳೆಸಿದಲ್ಲಿ ರಾಷ್ಟ್ರ
ದಲ್ಲಿ ಇವುಗಳು ದೇಶದ ಹಾಗೂ ಸಮಾಜದಲ್ಲಿ ಮಾರ್ಪಾಟು ಹೊಂದಿ ಪ್ರಗತಿಯನ್ನು
ಪಡೆಯುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಮಥುರೆಯಲ್ಲಿ ನಡೆದ ಗೋಷ್ಠಿ
ಯಲ್ಲಿ ತಜ್ಞರಿಂದ ವ್ಯಕ್ತಪಟ್ಟ ಈ ಅಂಶಗಳು ಇವುಗಳನ್ನು ಚರ್ಚಿಸಿ ಸರಕಾರಕ್ಕೆ ಸೂಕ್ತ
ಸಲಹೆ ನೀಡಿರುವುದು ಸಾರ್ವಕಾಲಿಕವೂ ಹಾಗೂ ಸಾಮಯಿಕವೂ ಆಗಿವೆ.

# ಬಸವರಸರ ಲೀಲೆಗಳು—

ಹೆಚ್: ಜಿ. ರಾಧಾದೇವಿ
ನಂ. 12-1-71/4 ಗಂಜ್ ರಸ್ತೆ, ರಾಯಚೂರು-584101

**ಅರಿಕೆ :**

ಪುರಾತನ ಕವಿಗಳು ಬಸವಣ್ಣನವರ ಮೇಲೆ ಸಾಕಷ್ಟು ಕಾವ್ಯ ಬರೆದಿದ್ದಾರೆ. ಅವರ ಸಮಕಾಲಿನರು ಬಸವಣ್ಣನವರನ್ನು ತಮ್ಮ ವಚನಗಳಲ್ಲಿ ಕನ್ನಡಿ ಹಿಡಿದಿದ್ದಾರೆ.

ಇತ್ತೀಚಿನ ಖ್ಯಾತ ವಿದ್ವಾಂಸರುಗಳು ಕಾಲ, ದೇಶಗಳ ಬಗ್ಗೆ ಇತಿಹಾಸದಿಂದಾಯ್ದು ಪ್ರಮಾಣ ಬದ್ಧ ಕುರುಹು ನೀಡಿ ಬಸವ ಚರಿತ್ರೆ ಬಗ್ಗೆ ನೂರಾರು ಗ್ರಂಥ ಬರೆದಿದ್ದಾರೆ.

ಆದರೆ ಜಾನಪದ ಸಂಗ್ರಹದಲ್ಲಿ ಬರುವ ಬಸವಣ್ಣನವರ ನಿಲವು ಅವರು ದೇವಮಾನವರೆಂಬ ನಿರೂಪಣೆ ಮಾತ್ರ.... ನೀಡುತ್ತದೆ. ಅವರ ಹುಟ್ಟು, ಬಾಲ್ಯ, ಉಪನಯನ ಇತ್ಯಾದಿ ಅವರ ಬದುಕಿನ ಒಂದೊಂದು ಘಟನೆಗಳು ಮುಗ್ಧ ಹಳ್ಳಿಗರ ಘಟನೆಗಳು ಮುಗ್ಧ ಹಳ್ಳಿಗರ ಕಣ್ಣಿಗೆ ಪವಾಡವಾಗಿ ಕಾಣುತ್ತದೆ. ಯಾರ ಅಪ್ಪೇಕ್ಷಣೆಗೆ ಭಯಪಡದೆ, ಯಾರ ಮೆಚ್ಚುಗೆಗೆ ಹಾತೊರೆಯದೆ.... ತನ್ನ ಹೃದಯದ ಭಕ್ತಿ ಭಾವವನ್ನೇ ಸರಳ ಸುಂದರವಾಗಿ ಹಾಡಿರುವ ಈ ಕಥಾನಕ— ಜನಸಾಮಾನ್ಯರ ಹೃದಯ ರಂಜಿಸುವುದೆಂದು ಸಂಗ್ರಹಕಾರ್ತಿಯಾದ ನನ್ನ ತವಕ.... ಇದನ್ನು ಪ್ರಕಟಿಸುವ ಔದಾರ್ಯತೋರಿದ ಸಿದ್ಧಗಂಗಾ ಮಾಸ ಪತ್ರಿಕೆ ಸಂಪಾದಕ ಮಂಡಳಿಯವರಿಗೆ ನನ್ನ ವಂದನೆಗಳು.

ಜನನ :- ಜಾನಪದ ಸಾಹಿತ್ಯದಲ್ಲಿ ಚಿತ್ರಿತವಾಗಿರುವ ಬಸವಣ್ಣನವರ ಹುಟ್ಟು, ಅವರ ಮೊದಲನೆ ಪವಾಡವೆಂದು ಹಳ್ಳಿಗರು ಹಾಡಿ ಕುಣಿಯುತ್ತಾರೆ. ಬಸವಣ್ಣನವರ ಹುಟ್ಟಿನ ರಹಸ್ಯವನ್ನು ಪವಾಡ ರಚನಕಾರರು ಹೀಗೆ ಸ್ತೋತ್ರ ಮಾಡುತ್ತಾರೆ.

ಬಾಗೆವಾಡಿ ಬಸವಂಗೆ ಸುವ್ವಲಾಲಿ
ಬಾಗಿ ನಾನು ಶರಣೆಂದ್ರೊ ಸುವ್ವಲಾಲಿ
ಬಸವ ಏಕೆ ಇಲ್ಲಿ ಬಂದ್ರೊ ಸುವ್ವಲಾಲಿ
ಶಿವನ ಶಾಪ ಹೊತ್ತು ಬಂದ್ರೊ ಸವ್ವಲಾಲಿ [೧||

ಶಿವನ ಶಾಪ ಹೊತ್ತು ಬಂದ ಬಸವಣ್ಣ ಯಾರೆಂದು ಹಳ್ಳಿಯ ಹೆಣ್ಮಕ್ಕಳ ಕುತೂ
ಹಲ !

ಬಸವ ಯಾರು....ಬಂದುದ್ದೇಕೆ ಸುವ್ವಲಾಲಿ
ಶಿವನ ಶಾಪ ಹೊತ್ತುದ್ದೇಕೆ ಸುವ್ವಲಾಲಿ
ಶಿವನ ನಂದಿ ನಮ್ಮ ಬಸವ ಸುವ್ವಲಾಲಿ
ಲೋಕ ಕಲ್ಯಾಣಕ್ಕೆ ಶಾಪಹೊತ್ತು ಸುವ್ವಲಾಲಿ ||೨||

ಮನದಲ್ಲಿ ಏನಾದರೂ ಕೆಟ್ಟ ಆಲೋಚನೆ ಸುಳಿದೀತೆಂದು ನೆರದ ಜನಕ್ಕೆ ಎಚ್ಚರಿ
ಮತ್ತೆ ಕಥೆ ಮುಂದುವರಿಸುತ್ತಾರೆ.

ದುಷ್ಟನಲ್ಲ ಭ್ರಷ್ಟನಲ್ಲ ಸುವ್ವಲಾಲಿ
ಲೋಕಕಾಗಿ ಶಾಪಹೊತ್ತ ಸುವ್ವಲಾಲಿ
ಸತ್ಯವಂತ ಬಸವಣ್ಣ ಸುವ್ವಲಾಲಿ
ಮತ್ತೆ ನಮಗಾಗಿ ಕೈಲಾಸದಿಂದಿಳಿದ ಸುವ್ವಲಾಲಿ ||

ಕೆಟ್ಟ ಆಲೇಚನೆ ಎಡದಿಂದ ಬಂದಿದ್ದರೆ ಎರಡು ಯೋಜನ ತಳ್ಳು.... ಬಲದ ಕಡೆ
ಯಿಂದ ಬಂದಿದ್ದರೆ ಬಾಗೇವಾಡಿಗೆ ನಮಿಸು.... ಎಂದು ಕರ್ಪೂರದಾರತಿ ಎತ್ತಿ ಮತ್ತೆ
ಕಥೆಯನ್ನು ಮುನ್ನೆಡೆಸುತ್ತಾರೆ.

ಒಮ್ಮೆ ಕೈಲಾಸದಲ್ಲಿ ಸುವ್ವಲಾಲಿ
ಅಮ್ಮ ಪಾರ್ವತಿದೇವಿ ಸುವ್ವಲಾಲಿ
ತನ್ನ ಪತಿಯ ಕೇಳಿದಳು ಸುವ್ವಲಾಲಿ
ನಿನ್ನ ಮೂರನೆ ಕಣ್ಣ ತೆರೆಯೆಂದು ಸುವ್ವಲಾಲಿ ||೩||

ಆದರೆ ಲೋಕ ಕಲ್ಯಾಣದ ಹೊಣೆ ಹೊತ್ತ ಶಿವ ಪಾರ್ವತಿಯ ಬೇಡಿಕೆಯನ್ನು
ಗಮನಿಸುವುದಿಲ್ಲ. ಶಿವಮಾಯೆಯಿಂದ ಮೋಹಿತಳಾದ ಪಾರ್ವತಿ ಶಿವನನ್ನು ಕಾಡಿ
ಸುತ್ತಾಳೆ.

ಆಗ ಶಿವ ರುದ್ರರು ಎಚ್ಚರಿಸುತ್ತಾ—

ನಮ್ಮ ಕಣ್ಣಿನಿಂದ ಜ್ವಾಲೆ ಹೊರಟು ಸುವ್ವಲಾಲಿ
ಇರೇಳು ಲೋಕ ಸುಡುತ್ತಿರೆ ಸುವ್ವಲಾಲಿ
ನಮ್ಮ ಜಟೆಯ ಗಂಗೆ ಕೆದರಿ ಹರಿಸೆ ಸುವ್ವಲಾಲಿ
ಉರಿಯ ನಾರಿಸುವರಾರೆ....ಸುವ್ವಲಾಲಿ ||೩||

ಆಗ ಪಾರ್ವತಿ ಹಮ್ಮಿನಿಂದ—

ಕೋಟಿ ಕೋಟಿ ಭೂತಗಣರು ಸವ್ವಲಾಲಿ
ಜಟೆಯ ಕೆದರಿ ಗಂಗೆ ಹರಿಸೆ ಸುವ್ವಲಾಲಿ

ಸಾಟಿಯಾರು ಗಣಪ' ಗುಹಗೆ ಸುವ್ವಲಾಲಿ
ಮೀಟಿ ನಂದಿ, ಬೃಂಗಿ ಇಹರೋ.... ಸುವ್ವಲಾಲಿ ||೪||

ಎನ್ನುತ್ತಾಳೆ. ತಾವು ಮೂರನೆಯ ಕಣ್ಣು ತೆರೆದರೆ ಲೋಕ ಪ್ರಳಯವಾದೀತೆಂದು ಶಿವರುದ್ರರು ಅಂಜಿ– ಪಾರ್ವತಿಗೆ ಮತ್ತೆ ನೆಪ ಹೇಳುತ್ತಾರೆ. ಭೂತಗಣಗಳು ಬಂದ ಜಟೆ ಬಿಚ್ಚಿ ಗಂಗೆ ಹರಿಸಲಿ.... ಆಗ ಮೂರನೆಯ ಕಣ್ಣು ತೆರೆಯುತ್ತೇನೆ ಎಂದು. ಆಗ ಪಾರ್ವತಿಯ ಆಜ್ಞೆಯಂತೆ ಸಕಲ ಭೂತಗಣಗಳು ಶಿವನ ಜಡೆಯನ್ನು ಬಿಚ್ಚ ಲೆತ್ನಿಸಿ ಸೋತು ಹೋಗುತ್ತಾರೆ.

ಕೋಟಿ ಕೋಟಿ ಭೂತಗಣರು ಸುವ್ವಲಾಲಿ
ಶಿವನ ಸ್ತುತಿಸಿ ಬಂದರು ಸುವ್ವಲಾಲಿ
ಮೀಟಲ್ಲೊಂದು ಕೂದಲ... ಸುವ್ವಲಾಲಿ
ಆಗಲಿಲ್ಲ ಶಿವನ ಮಾಯೆ ಸುವ್ವಲಾಲಿ ||

ಗುಹ, ಗಣಪ, ಷಣ್ಮುಖರು ಪ್ರಯತ್ನಿಸಿದರೂ ಸಹ ಜಟೆಯ ಒಂದು ಕೂದಲು ಅಲುಗಿಸಲು ಆಗಲಿಲ್ಲ! ಶಿವಮಾಯೆಯಿಂದ ಎಲ್ಲರು ಸೋತಾಗ, ಶಿವನ ವಾಹನ ನಂದಿ ಮುಂದೆ ಬರುತ್ತಾನೆ.

ಶಿವನೆ ನಿನ್ನ ಜಟೆಯಲ್ಲಿ ಸುವ್ವಲಾಲಿ
ಇರುವ ಗಂಗೆ ಭೂಲೋಕಕ್ಕೆ ಸುವ್ವಲಾಲಿ
ತಾಯಿ ಗೌರಿ ಅಣತಿಯೆಂದು ಸುವ್ವಲಾಲಿ
ದೇವ ಜಟೆಯ ಬಿಚ್ಚಿದೆನೊ ಸುವ್ವಲಾಲಿ ||

ಹೀಗೆ ಸ್ತುತಿಸಿ ಶಿವನ ಜಟೆ ಬಿಚ್ಚಿ ಬಿಡುತ್ತಾನೆ. ಭೂಲೋಕದ ಜನರು ದುರ್ಬಲರು ಪಾಪಿಗಳು ಅವರಿಗೆ ಸುಲಭವಾಗಿ ಪಾಪ ಪರಿಹಾರವಾಗಲೆಂದು ಗಂಗಾಸ್ನಾನವಿದೆ. ಆದ್ದರಿಂದ ಗಂಗೆ ಭೂಲೋಕಕ್ಕೆ ಹರಿಯಲೆಂದು ಪ್ರಾರ್ಥಿಸಿ ಜಟೆಯನ್ನು ಕೆದರುತ್ತಾನೆ.

ಹಿಮಗಿರಿಯ ಅಗಲಕ್ಕು ಸುವ್ವಲಾಲಿ
ಶಿವನ ಜಟೆ ಕೆದರಿತೊ ಸುವ್ವಲಾಲಿ
ಹಿಮಗಿರಿಯ ಎತ್ತರಕ್ಕು ಸುವ್ವಲಾಲಿ
ಶಿವನ ಜಟೆ ಹರಡಿತೊ ಸುವ್ವಲಾಲಿ ।

ಹೀಗೆ ಗಂಗೆ ಆರು ಭಾಗವಾಗಿ ಹರಿಯುತ್ತಾಳೆ, ಗುಹ, ಗಣಪರು, ಸ್ವತಃ ಪಾರ್ವತಿ ದೇವಿ ಸಹ ನಿಂತು ತಡೆದು ಐದು ಭಾಗವನ್ನು ಪಾತಾಳ ಲೋಕ, ಸತ್ಯಲೋಕ, ಸ್ವರ್ಗ ಇತ್ಯಾದಿ ಲೋಕಕ್ಕೆ ಹರಿಯ ಬಿಡುತ್ತಾರೆ. ಆದರೆ ಲೋಕ ಮೋಹ ಹೊತ್ತ

ನಂದೀಶ ಕೋಡಿನಿಂದ ದಾರಿ ತೋಡಿ ಬಂದು ಪ್ರವಾಹವನ್ನು ಭೂಲೋಕಕ್ಕೆ ಅಟ
ತ್ತಾನೆ. ಆಗ ಶಿವರುದ್ರರು ಕೋಪ ನಟಿಸಿ—

ಭೂಮಿ ಮೋಹ ಬಹಳವಾಯ್ತೊ ಸುವ್ವಲಾಲಿ
ಭೂ ಲೋಕಕ್ಕೆ ಸಾಗು ನೀನು ಸುವ್ವಲಾಲಿ
ಅಲ್ಲಿನ ಜನರಿಗೆ ಗಂಗೆಯೊಡನೆ ಸುವ್ವಲಾಲಿ
ಪಾಪ ಪರಿಹಾರಕ್ಕೆ ನೀನು ಆಗು ಸುವ್ವಲಾಲಿ ||

ಎಂದು ಶಾಪ ಕೊಡುತ್ತಾನೆ. ಗಂಗಾ ಸ್ನಾನ ಮಾಡಿದರೆ ಹೇಗೆ ಪಾಪ ಪರಿಹಾ
ವಾಗುವುದೊ ಅದರಂತೆ ಬಸವರ ಚರಿತ್ರೆ ಕೇಳಿದರೂ ಪಾಪ ಪರಿಹಾರವಾಗುವುದೆಂದ
ನಮ್ಮ ಹಳ್ಳಿಯ ಜನ ಭಾವಿಸುತ್ತಾರೆ.

ಇಂಗಳೇಶ್ವರ ಬಾಗೆವಾಡಿ ಸುವ್ವಲಾಲಿ
ನಮ್ಮ ಬಸವಣ್ಣ ಜನಿಸ್ಯಾರೆ ಸುವ್ವಲಾಲಿ
ಮಂಗಳಕರ ಮಹಿಮೆಗಳ ಸುವ್ವಲಾಲಿ
ನಮ್ಮ ಬಸವಣ್ಣ ಮಾಡ್ಯಾರೆ ಸುವ್ವಲಾಲಿ ||

ಕರ್ನಾಟಕ ರಾಜ್ಯದಲ್ಲಿ ಇಂಗಳೇಶ್ವರ ಬಾಗೇವಾಡಿ ಒಂದು ಸುಂದರವಾದ ಅಗ್ರಹಾರ
ಅಲ್ಲಿ ಮಾದರಸ, ಮಾದಲಾಂಬಿಕೆ ಎಂಬ ಸಾತ್ವಿಕರಾದ ಶಿವಭಕ್ತ ದಂಪತಿಗಳಿದ್ದಾರೆ.
ಅವರಿಗೆ ಮಕ್ಕಳಿರಲಿಲ್ಲ. ಮಾದಲಾಂಬಿಕೆ ಊರಿನ ಶಿವಾಲಯಕ್ಕೆ ಬಂದು ಸೇವೆ
ಸಲ್ಲಿಸುತ್ತಾಳೆ.

ಹಾಲು ಸಲ್ಲಿಸಿ ಶಿವಗೆ ಸುವ್ವಲಾಲಿ
ಏಳು ದಿವಸದ ಸೇವೆ ಸುವ್ವಲಾಲ
ಹಣ್ಣು ಸಲ್ಲಿಸಿ ಶಿವಗೆ ಸುವ್ವಲಾಲಿ
ಏಳು ದಿವಸದ ಸೇವೆ ಸುವ್ವಲಾಲಿ

ಹೀಗೆ ಮಾದಲಾಂಬಿಕೆ ಊರಿನ ಶಿವಾಲಯದಲ್ಲಿ ಸಂತಾನಕ್ಕಾಗಿ ಸೇವೆ ಮಾಡುತ್ತಾಳೆ.

ಆಗ ಸಿದ್ಧರೊಬ್ಬರು ಮಾದಲಾಂಬಿಕೆಯ ಕನಸಿನಲ್ಲಿ ಬಂದು ಈ ರೀತಿ ಆಜ್ಞೆ
ಮಾಡುತ್ತಾರೆ. ನಂದಿಕೇಶ್ವರನ ಸೇವೆಯಿಂದ ಆತನಿಗೆ ತೃಪ್ತಿಯಾಗಿದೆ. ಆತನ
ಮುಂದಿರುವ ನಂದಿಯ ಸೇವೆ ಮಾಡಬೇಕು. ಅದು ಹೇಗೆಂದರೆ

ನಂದಿಯ ಕೊಂಬಿಗೆ ಸುವ್ವಲಾಲಿ
ಮಲ್ಲಿಗೆ ಸುತ್ತಬೇಕೊ ಸುವ್ವಲಾಲಿ
ನಂದಿಯ ಬೆನ್ನಿಗೆ ಸುವ್ವಲಾಲಿ
ಕಮಲ, ಕೇದಿಗೆ ಹೊದಿಸಿ ಸುವ್ವಲಾಲಿ

ಅಷ್ಟೆ ಅಲ್ಲ, ಹದಿನಾರು ಬಗೆಯ ಕುಸ್ಪದ ಭಕ್ಷ್ಯ ನಂದಿಗೆ ನೈವೇದ್ಯ ಮಾಡಬೇಕು. ಗಂಟೆ, ಜಾಗಟೆಗಳಿಂದ ಕೂಡಿದ ಮಂತ್ರೋಕ್ತ ಪೂಜೆಯಾಗಬೇಕು. ಅನಂತರ ನಂದೀಕೇಶ್ವರಂಗೆ ಅಭಿಷೇಕ ಮಾಡಿದ ಹಾಲು ಬೆಳ್ಳಿ ತಂಬಿಗೆಯಿಂದ ತನ್ನ ಬೊಗಸೆಯಲ್ಲಿ ಬಗ್ಗಿಸಿಕೊಂಡು ನಂದಿಯ ಬಾಯಿಗೆ ಹಿಡಿದು ಶಿವನಾಮ ಹೇಳುತ್ತ ಕುಡಿಸಬೇಕು. ನೂರೆಂಟು ಶಿವನಾಮ ಜಪಿಸಿದ ನಂತರ ಅದೇ ಹಾಲನ್ನು ತಾನು ಕುಡಿಯಬೇಕು ಈ ರೀತಿ ಏಳು ದಿನ ಮಾಡಬೇಕೆಂದು ಅಜ್ಞೆ ವಿಧಿಸುತ್ತಾರೆ.

ಊರಗೊಡೆಯ ಮಾದರಸ ಸುವ್ವಲಾಲಿ
ಭಾರಿ ಸೇವೆ ಮಾಡಿಸಿದ ಸುವ್ವಲಾಲಿ
ಈರೇಳು ದಿಕ್ಕಿನಲ್ಲಿ ತಾನು ಸುವ್ವಲಾಲಿ
ಹೊಳೆವ ಬಾಳೆ ಚಪ್ಪರವು ಸುವ್ವಲಾಲಿ

ಕಳಸ ಕನ್ನಡಿ ಹಿಡಿಸಿ, ಪನ್ನೀರು ಚುಮುಕಿಸಿ, ಬೀದಿ ಬೀದಿ ತೆರವು ಮಾಡಿಸಿ ಊರ ಮಂದಿಗೆಲ್ಲ ಷಡ್ರಸೋಪೇತದ ಭೂರಿ ಭೋಜನ ಏರ್ಪಾಡಾಯಿತು. ಊರ ಅಗ್ರಹಾರಕ್ಕೆ ನಂದಿಕೇಶ್ವರ ದೇವಾಲಯವೆ ಹಿರಿದು. ನಂದಿಕೇಶ್ವರನ ಮುಂದಿದ್ದ ವೃಷಭಂಗೆ ಈಗ ಸೇವೆ ಪ್ರಾರಂಭವಾಗಿದೆ. ಏಳು ದಿನದ ಸೇವೆ ನಿರ್ವಿಘ್ನವಾಗಿ ಮುಗಿದಿದೆ. ಜರಿಯ ಕಂಕಾಪಿನ ವಸ್ತ್ರ ಹೊದಿಸಿದ ಬಸವನ ಕತ್ತಿನಲ್ಲಿ ಮುತ್ತಿನ ಹಾರಗಳು ತೂಗಾಡುತ್ತಿದೆ. ಗಂಧ ಚಂದನಗಳಿಂದ ಮಲ್ಲಿಗೆ ಜಾಜಿ ತೂಗಾಡುತ್ತಿದೆ. ಚಂದನಗಳಿಂದ ಮಲ್ಲಿಗೆ ಜಾಜಿ ಕೇತಕಿ, ಚಂಪಕ, ಪುನ್ನಾಗದಿಂದ ಪೂಜಿಸಿದ್ದಾರೆ.

ಬೆಳ್ಳಿ ಹರಿವಾಣದಾಗೆ ಸುವ್ವಲಾಲಿ
ಒಳ್ಳೆ ಕುಸ್ಪದ ಭಕ್ಷ್ಯ ಸುವ್ವಲಾಲಿ
ಮಲ್ಲಿಗೆ, ಸಂಪಿಗೆ ಹಾರ ಸುವ್ವಲಾಲಿ
ಎಲ್ಲಾ ಪೂಜೆ ಬಸವಂಗಾಯ್ತು ಸುವ್ವಲಾಲಿ

ಮಾದಲಾಂಬಿಕೆ ಕಡೆಯಲ್ಲಿ ನಂದಿಕೇಶ್ವರ ಲಿಂಗಕ್ಕೆ ಅಭಿಷೇಕ ಮಾಡಿದ ಹಾಲು ಬೆಳ್ಳಿ ತಂಬಿಗೆಯಲ್ಲಿ ತುಂಬಿ ತರುತ್ತಾಳೆ. ಆ ದಿನ ಹಾಲು ಹಿಡಿವಾಗ ಒಂದು ಶುಭ ಶಕುನವಾಗಿದೆ. ಏನಪ್ಪಾ.... ಎಂದರೆ....?

ಶಿವಲಿಂಗದಿಂದ ಹೂವುದುರಿ ಸುವ್ವಲಾಲಿ
ಶಿವನ ವರ ಅವರಿಗಾಯ್ತು ಸುವ್ವಲಾಲಿ
ಶಿವಲಿಂಗದಿಂದ ಗಂಧ ಹರಿದು ಸುವ್ವಲಾಲಿ
ಶಿವನ ಪ್ರಸಾದ ಅವರಿಗಾಯ್ತು ಸುವ್ವಲಾಲಿ

ಮಾದರಸ ಭಕ್ತಿಯಿಂದ ಲಿಂಗದಿಂದ ಹರಿದು ಬಂದ ಗಂಧವನ್ನು ಹಚ್ಚಿಕೊಂಡ. ಮಾದಲಾಂಬಿಕೆ ಶಿವಲಿಂಗದಿಂದ ಉದುರಿದ ಮಲ್ಲಿಗೆ ಹಾರದಿಂದ ಮುಡಿಯನ್ನು ಸಿಂಗರಿಸಿಕೊಂಡಳು. ಅನಂತರ ಶಿವಲಿಂಗಕ್ಕೆ ಅಭಿಷೇಕ ಮಾಡಿದ ಹಾಲನ್ನು ನಂದೀಶನ ಹತ್ತಿರಕ್ಕೆ ತರುತ್ತಾಳೆ.

ಬೊಗಸೆಯಲ್ಲಿ ಹಾಲು ಸುಂದು ಸುವ್ವಲಾಲಿ
ನಂದಿ ಮುಖಕ್ಕೊಡ್ಡಿದಳು ಸುವ್ವಲಾಲಿ
ಬೊಗಸೆಯಿಂದ ಜಿಗಿದ ಶಿಶುವು ಸುವ್ವಲಾಲಿ
ಅಂಬೆ ಎಂದು ಒದರಿತ್ತೈಯಕಾ ಸುವ್ವಲಾಲಿ

ಊರಿನ ಜನರೆಲ್ಲ ಈ ವಿಚಿತ್ರ ಕಂಡು ಬೆರಗಾಗುತ್ತಾರೆ. ಮಾದಲಾಂಬಿಕೆ ಬೆದರಿ ಬೊಗಸೆ ಸಡಲಿಸಿದಾಗ ಆ ಬೊಗಸೆ ಹಾಲೇ.... ಶಿವಾಲಯದಲ್ಲಿ ಹಾಲು ಹೊಳೆಯಾಗಿ ಹರಿಯುತ್ತದೆ.

ಹಾಲಿನಿಂದ ಜಿಗಿದ ಶಿಶುವು ಸುವ್ವಲಾಲಿ
ಬಾಲೆಯರು ಎತ್ತಿಕೊಂಡ್ರೋ ಸುವ್ವಲಾಲಿ
ಅಲಿಯಾಡಿಸದ ಶಿಶುವ ಕಂಡು ಸುವ್ವಲಾಲಿ
ಬಾಲೆಯರು ಬೆದರಿದರು ಆಗ ಸುವ್ವಲಾಲಿ

ಮಗು ಹೊನ್ನ ಪುತ್ಥಳಿಯಂತೆ ಥಳ ಥಳಿಸಿದೆ. ಮುವ್ವತ್ತೆರೆಡು ಶುಭ ಲಕ್ಷಣಗಳಿಂದ ಕೂಡಿದೆ. ಆದರೆ ನೆಟ್ಟಗಣ್ಣಿನಿಂದ ಇರುವ ಶಿಶು ಕಣ್ಣು ಪಿಳುಕಿಸಿಲ್ಲ ಅತ್ತಿಲ್ಲ. ಮಾದಲಾಂಬಿಕೆ ಅವಳ ಗೆಳತಿಯರು ಬೆದರುತ್ತಾರೆ. ಆಗ ಸಿದ್ಧಗುರುವರ್ಯ ಮಲ್ಲಪ್ಪ ಬಂದು ಮಗುವನ್ನು ಆ ಕಲ್ಲನಂದಿಯ ಬೆನ್ನ ಮೇಲೆ ಹರಡಿದ್ದ ಹೂ ರಾಶಿಯ ಮೇಲೆ ಮಲಗಿಸುತ್ತಾರೆ. ಆಗ....

ಕಲ್ಲ ನಂದಿ ಕೊರಳಿನಿಂದ ಸುವ್ವಲಾಲಿ
ಗಂಟೆಗಳು ಘಣ ಘಣಿರೆಂದ್ವೊ ಸುವ್ವಲಾಲಿ
ಕಲ್ಲನಂದಿ ಕಾಲುಗೆಜ್ಜೆಸ್ವರ ಸುವ್ವಲಾಲಿ
ಘಲ್ ಘಲ್ಲಿರೆಂದವೊ.... ಸುವ್ವಲಾಲಿ

ಆ ಸದ್ದಿಗೆ ಶಿಶು ಚೀರಿ.... ಅಂಬೆ.... ಅಂಬೆ.... ಎಂದು ಅಳುತ್ತದೆ. ಎಲ್ಲರೂ ಈ ಪವಾಡಕ್ಕೆ ಚಕಿತರಾಗುತ್ತಾರೆ.

# ಸರ್ವಜ್ಞ ನೀಡಿದ ಲೋಕ ಶಿಕ್ಷಣ

—ವ. ಶಿ. ರಾಮಕೃಷ್ಣಯ್ಯ 'ರಾಶಿ'

ವಿದ್ಯಾ ಮಂಡಲ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ–585106.

ಜ್ಞಾನದಿಂದಲಿ ಇಹವು : ಜ್ಞಾನದಿಂದಲಿ ಪರವು :
ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು
ಹಾನಿ ಕಾಣಯ್ಯ ಸರ್ವಜ್ಞ :

ಎಂಬಂತಹ ತ್ರಿಪದಿ ವಚನಗಳನ್ನಾಡಿ, ತ್ರಿಕಾಲಜ್ಞಾನಿಯಾಗಿ ಮೆರೆದ ಮಹಾಪುರುಷರತ್ನ, ಸಾಹಿತ್ಯ ಚಿಂತಾಮಣಿಯಾಗಿ, ಎಲ್ಲರ ತನುಮನಗೆದ್ದ ರಸಋಷಿ ಸರ್ವಜ್ಞ. ಸರ್ವಜ್ಞನೆಂದರೆ ಸರ್ವವನ್ನು ಅರಿತವನು ಸಕಲ ಚರಾಚರಗಳಲ್ಲಿಯೂ ಸರ್ವವ್ಯಾಪಿಯಾಗಿ ಸಮಯೋಚಿತ ಸ್ಫೂರ್ತಿದಾಯಕ ಶಕ್ತಿಯಾಗಿದ್ದವನು ಎಂದರ್ಥ. ಅಂತಹ ಒಂದು ಪವಿತ್ರ ಸ್ಥಾನವನ್ನು ಪಡೆದವನು ಸಾಕ್ಷಾತ್ ಪರಮಾತ್ಮನಿಗೆ ಸಮ. ಅಂದಲ್ಲಿ ಸರ್ವಜ್ಞನೆಂದರೆ ಯಾರು...? ಆತ ಪರಮಾತ್ಮನೇ? ಅಥವಾ ಸರ್ವಜ್ಞನೆಂಬುವುದು ಆತನ ನಾಮಧೇಯವೇ...? ಇತ್ಯಾದಿ ಪ್ರಶ್ನೆಗಳು ತಲೆಯಲ್ಲಿ ಸುಳಿಯುತ್ತವೆ. ಇದು ಸ್ವಾಭಾವಿಕ. ಸರ್ವಜ್ಞನ ನಿಜನಾಮದ ಬಗ್ಗೆ ಹಲವಾರು ಸಂಶಯಗಳಿವೆ. ಸರ್ವಜ್ಞನೆಂಬುದು ಆತನ ಹೆಸರು ಎಂದು ಕೆಲವರು ವಾದಿಸಿದರೆ, ಇಲ್ಲಾ, ಅದು ಆತನ ಅಂಕಿತನಾಮ ಸರ್ವಾಂತರ್ಯಾಮಿಯಾದ ಪರಮಾತ್ಮನಿಗೆ ಆತ ಸರ್ವಜ್ಞ ಎಂದು ಕರೆದಿದ್ದಾನೆಂದು ಮತ್ತೆ ಕೆಲವರು ತರ್ಕಿಸುತ್ತಾರೆ ಹೀಗಾಗಿ ಆತನ ನಿಜವಾದ ಹೆಸರಿನ ಬಗ್ಗೆ ಖಚಿತವಾದ ಅಭಿಪ್ರಾಯಗಳು ವ್ಯಕ್ತಪಟ್ಟಿಲ್ಲ.

ಅದೇನೇ ಇರಲಿ; ಸರ್ವಜ್ಞನೆಂದಾಕ್ಷಣ ನಮ್ಮ ಕಣ್ಣೆದುರು ಕಟ್ಟಬರುವ ಚಿತ್ರ ಒಬ್ಬ ಬಡ ಭಿಕ್ಷುಕನದು. ಕೈಯಲ್ಲಿ ಭಿಕ್ಷಾಪಾತ್ರೆ ಹಿಡಿದು ಮೈಮೇಲೆ ಹರಕಲು ಕಂಬಳಿಯನ್ನು ಹೊದ್ದು, ಬಡಿಗೆಯನ್ನು ಹಿಡಿದು ಅನ್ನಕ್ಕಾಗಿ ಮನೆ ಮನೆಗೆ ತಿರುಗುವ ತಿರುಕನ ಚಿತ್ರದಂತೆ ಆತನ ಭಾವ ನಮ್ಮೆದುರು ತೇಲಿಬರುತ್ತವೆ. ಆತ ಯಾರೇ ಇರಲಿ, ಹೇಗೋ ಇದ್ದು ಹೋಗಿರಲಿ ಅದು ಮುಖ್ಯವಲ್ಲ. ದೊಡ್ಡವರ ಹುಟ್ಟು, ಗಳಿಕೆ, ಹೆಣ್ಣುಮಕ್ಕಳ ವಯಸ್ಸು ಕೇಳಬಾರದೆನ್ನುತ್ತಾರೆ. ಆತನ ನಡೆನುಡಿ ಮತ್ತು ಆತ ನಮ್ಮ ಸಾಹಿತ್ಯಕ್ಕೆ ನೀಡಿದ ಸೇವೆ, ಸಾಕ್ಷೀಭೂತವಾಗಿ ಕೈಗನ್ನಡಿಯಾಗಿ ಕಂಗೊಳಿಸುತ್ತವೆ. ಮಾಸದೇ ಥಳಥಳಿಸುತ್ತಿವೆ. ಹೀಗೆ ಆತನ ಬದುಕೊಂದು ನಮಗೆಲ್ಲಾ ದಿವ್ಯ ಮಾರ್ಗದರ್ಶನ.

ಧಾರವಾಡ ಜಿಲ್ಲೆಯ 'ಮಾಸೂರು' ಎಂಬಲ್ಲಿ ಬಸವರಸನೆಂಬ ಸಾತ್ವಿಕನಿ
ಸತ್ಪುರುಷನಾಗಿ ಹುಟ್ಟಿದವನು. ಆತ ಮನೆಯನ್ನು ಬಿಟ್ಟಕಾರಣವಾಗಲೀ....ತನ
ಜೀವಿತವನ್ನು ಕೊನೆಗಲ್ಲಿ ಮುಗಿಸಿದನೆಂಬ ನೆಲೆಯಾಗಲೀ ತಿಳಿಯದೇ ಇರುವ ಅಂ
ಗಳಾಗಿವೆ. ಆತನ ವಿವೇಕ ಚಿಂತಾಮಣಿಯನ್ನು ಕೆದಕಿ ನೋಡಿದಾಗ, ಅಲ್ಲಿ ಇ
ದಂತೆಲ್ಲಾ ಸಮುದ್ರದ ತಳದಲ್ಲಿ ಚಲ್ಲಿರುವ ಮುತ್ತುರತ್ನಗಳಂತೆ ಅಮೋಘವಾ
ಜ್ಞಾನದ ರಾಶಿಯೇ ಕಾಣಿಸುತ್ತದೆ. ತಾನೊಬ್ಬ ನೇಮಮಾತ್ರದಿಂದ ಸರ್ವಜ್ಞನೆಂ
ನಾಮಾಂಕಿತವನ್ನಿಟ್ಟುಕೊಂಡು ಆ ಪರಶಿವನನ್ನು ಉದ್ದೇಶಿಸಿ ಪರಮಾತ್ಮನೇ ಹೇ
ದ್ದಾನೆ-ಹೇಳುತ್ತಿದ್ದಾನೆನ್ನುವಂತೆ ವಚನಗಳನ್ನಾಡಿ ವರಖುಷಿಯಾಗಿ ಮೆರೆದಿದ್ದಾನೆ.

ಹನುಮನುದಯಿಸಿದ ಹೊನ್ನಾಡದ ನಮ್ಮ ಈ ಕರ್ನಾಟಕದ ಮಣ್ಣಿನಲ್ಲಿ ಹುಟ್ಟಿ
ಬೆಳೆದು ಆತ ನಮ್ಮ ನಾಡಿಗಾಗಿ ಸಲ್ಲಿಸಿರುವ ಸೇವೆ ಅಪಾರವಾದುದು-ಅಮೋಘ
ವಾದುದು. ಅದಕ್ಕಾಗಿಯೇ ಕನ್ನಡ ಸಾಹಿತ್ಯ ವರಚಿಂತಾಮಣಿಯಾಗಿ ಇಂದಿಗೂ
ಮೆರೆಯುತ್ತಿದ್ದಾನೆ. ಎಂದಿಗೂ ಮೆರೆಯುತ್ತಾನೆ. ತಾನು ಕಂಡರಿತ ಯಾವುದೆ
ವಿಷಯವನ್ನಾಗಲೀ ಅನುಭವವನ್ನಾಗಲೀ ತಾನು ತನ್ನ ಒಳಗಣ್ಣಿನಿಂದ ನೋಡಿ
ಮೂಡಿಬಂದ ಪ್ರತಿಕ್ರಿಯೆಯ, ಭಾವನೆಯನ್ನು ತನಗರಿತ ಸರಳ ಶುದ್ಧ ಕನ್ನಡದಲ್ಲಿ
ಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ ತ್ರಿಪದಿ ವಾಕ್ಯಗಳಲ್ಲಿ ಹಾಡಿದ್ದಾನೆ
ಜೀವನದ ಏರುಪೇರುಗಳಲ್ಲಿ ಅಂದಿಗೂ ಎಂದೆಂದಿಗೂ ವ್ಯತ್ಯಾಸ ಕಾಣದಂತೆ ಹಾಡಿ
ಆತನ ಮಾತಿನ ಮಾಣಿಕ್ಯಗಳು ಇಂದು ಮನೆಯಮಾತಾಗಿವೆ. ಆತ್ಮದ ದಿವ್ಯಜ್ಞಾ
ಜ್ಯೋತಿಯಾಗಿ ಬೆಳಗುತ್ತಿವೆ. ಊರೂರು ಸುತ್ತಿ ಜೀವನದಲ್ಲಿ ವಾಸ್ತವವಾಗಿ ಮೂಡಿ
ಬರುವ ಭಕ್ತಿ, ಭಾವನೆ, ಪ್ರೀತಿ, ವ್ಯಂಗ್ಯ, ವ್ಯಾವಹಾರಿಕ ಮತ್ತು ಜನತೆಯ ನಡವಳಿ
ಗಳನ್ನು ಕಣ್ಣಾರೆಕಂಡು ಸಂತಸಸೌರಭವನ್ನೂ ದುಃಖದ ಯಾವುದೇ ಪ್ರಸ್ತುತ ಸನ್ನಿ
ವೇಶವನ್ನು ಸಮತೂಕವಾಗಿ ತನಗೆನಿಸಿದ ರೀತಿಯಲ್ಲಿ ಹೇಳಿಬಿಡುತ್ತಾನೆ. ಹಾಗೆಂದ
ತಪ್ಪಾದೀತು; ಹೀಗೆಂದರೆ ಸರಿಯಾದೀತೇ ಎಂಬ ವಿಚಾರದ ಗೊಡವೆಗೂ ಹೋಗದ
ಮನದಿಂದ ಹುಟ್ಟಬಂದ ಸ್ಫೂರ್ತಿಯನ್ನು ಸೃಷ್ಟಿಗೆ ತಕ್ಕಂತೆ ಜೀವನಾಯಣವಾ
ಜೋಡಿಸಿ ಹೇಳುತ್ತಿದ್ದುದು ಅವನ ಒಂದು ವೈಶಿಷ್ಟ್ಯ.

ಅವನು ಹಾಡಿರುವ ಪ್ರತಿ ಪದ್ಯಗಳಲ್ಲಿಯೂ ರಸವತ್ತಾದ ಅರ್ಥವಿದೆ. ಯಾ
ಮುಲಾಜಿಗೂ ತಲೆಬಾಗದೇ, ಯಾವುದೇ ಹಂಗಿಗೂ ಬಗ್ಗದ, ಯಾವ ವಲಯಕ್ಕೂ
ಸೀಮಿತವಾಗದೇ ಆತ ಎಲ್ಲದರಲ್ಲಿಯೂ ಎಲ್ಲನಾಗಿ ಬೆರೆತು ಮಿಳಿತವಾಗಿದ್ದಾನೆ. ಆತನ
ದೃಷ್ಟಿಕೋನ ಸರ್ವವ್ಯಾಪಿಯಾದುದು. ಅಂತಲೇ ಸಮಾಜಶಿಕ್ಷಣ, ಧಾರ್ಮಿಕ ಶಿಕ್ಷಣ
ಆಧ್ಯಾತ್ಮಿಕಶಿಕ್ಷಣ, ವೈದ್ಯಕೀಯಶಿಕ್ಷಣ, ವ್ಯಾವಹಾರಿಕ ಶಿಕ್ಷಣ, ಮಹಿಳಾಶಿಕ್ಷಣ-ಹೀ
ಆತನ ಚಾಣಾಕ್ಷತನದ ಚಮತ್ಕಾರ ದೃಷ್ಟಿಕೋನ ಎಲ್ಲೆಡೆಯಲ್ಲಿಯೂ ಹರಿದು ಅಂ

ಶ್ರದ್ಧೆಯಿಂದ ಕೂಡಿದ ಮಂದಮತಿಗಳ ಕಣ್ತೆರಿಸಿ ಜ್ಞಾನದ ಹಾದಿಯತ್ತ ಪ್ರೋತ್ಸಾಹಿಸಿದ್ದಾನೆ, ಆತನ ವಚನ ಭಂಡಾರದ ಮೊನಚುಮಾತುಗಳಿಂದ.

ಆತನ ವಚನ ಭಂಡಾರ ನಮಗೊಂದು ವರಪ್ರದಾನ. ಆತನು ಅಪ್ರತಿಮ ಲೋಕಾನುಭವಿ. ಆತ ನೀಡಿದ ಲೋಕಶಿಕ್ಷಣ ಅನಂತವಾದದ್ದು. ಅದ್ಭುತವಾದದ್ದು, ಅಂತಲೇ

ವಿದ್ಯೆಯುಳ್ಳವನ ಮುಖವು : ಮುದ್ದು
ಬರುವಂತಿಕ್ಕು ವಿದ್ಯೆಯಿಲ್ಲದವನ ಬರಿ
ಮುಖವು : ಹಾಳೂರ ಹದ್ದಿನಂತಿಕ್ಕು ಸರ್ವಜ್ಞ :

ಎಂದಿದ್ದಾನೆ ಎಂದಾಗ ಆತ ವಿದ್ಯೆಗೆ ಎಂತಹ ಒಂದು ಗೌರವದ ಸ್ಥಾನವನ್ನು ಮಹತ್ತರ ಘಟ್ಟವನ್ನು ನೀಡಿದ್ದಾನೆಂಬುದು ತಿಳಿಯುತ್ತದೆ. ವಿದ್ಯೆ ಸಕಲಐಶ್ವರ್ಯಗಳ ಸಾಧನೆ. ಸನ್ಮಾರ್ಗದ ಜೀವನಾಡಿ. ಸತ್ಪುರುಷರ ಸುಲಕ್ಷಣವೆಂದು ಹೇಳುತ್ತಾರೆ ಮಹಾತ್ಮರು. ಇಂದಿಗೆ ಎಂದೆಂದಿಗೂ ಚಿರನೂತನವಾಗಿ, ಚಿರಂಜೀವಿಯಾಗಿ ಬಾಳಿ ಬೆಳಗುವುದು ವಿದ್ಯೆಯಿಂದೆನ್ನುತ್ತ, ವಿದ್ಯೆಯಿಂದ ಸಿಗುತ್ತದೇನು? ಎಂಬುದಕ್ಕಿಂತ ವಿದ್ಯೆಯಿಂದ ಸಿಗಲಾರದ್ದೇನೆಂಬುದನ್ನು ಅರಿತುಕೊಳ್ಳಬೇಕು ವಿದ್ಯೆಯಿಂದ ಒದಗಬರುವ ವಾಕ್ಚಾತುರ್ಯವನ್ನು ಸರ್ವಜ್ಞಕವಿ ಹೀಗೆ ಬಣ್ಣಿಸುತ್ತಾನೆ.

ಮಾತಿನಿಂ ನಗೆನುಡಿಯು : ಮಾತಿನಿಂ ಹಗೆ
ಹೊಲೆಯು : ಮಾತಿನಿಂ ಸರ್ವಸಂಪದವು :
ಲೋಕಕ್ಕೆ ಮಾತೇ ಮಾಣಿಕ್ಯ ಸರ್ವಜ್ಞ :

ಎಂಬಂತಹ ಹಿತೋಕ್ತಿಯನ್ನು ಮೆಚ್ಚಿ ನುಡಿದಿದ್ದಾನೆ. ಅಂತೆಯೇ ಆತನ ಅಂತರ್ಯವೂ ಸಾರುವಂತೆ ವಿದ್ಯೆಯನ್ನು ಕುರಿತು ಹಾಡಿ ಹೊಗಳಿದ್ದಾನೆ. ಆತನ ಚಾತುರ್ಯದ ಚಾಕಚಕ್ಯತೆಯು ಎಲ್ಲೆಡೆಯಲ್ಲಿಯೂ ಹಬ್ಬಿ ಹರಿದಿದೆ.

ಲೋಭಿಯನ್ನು ಕಂಡು ಮತ್ತೊಂದು ಕಡೆ ಸುಂದರವಾಗಿ ಹೇಳಿದ್ದಾನೆ. ಲೋಕದಲ್ಲಿ ಎಲ್ಲರೊಡನೆ ಒಂದಾಗಿ ಬಾಳಿ ಬದುಕುವುದು ಸ್ವರ್ಗ ಸುಖಕ್ಕಿಂತ ಮಿಗಿಲಾದುದೆಂಬ ಮಹಾ ಶರಣರ ವಚನದಂತೆ ಈತನು ಲೋಭಿಗಳಿಗೆ ಲೋಕಯುಕ್ತಿಯನ್ನು ನೀಡಿ ಕಣ್ತೆರಿಸಿದ್ದಾನೆ.

ಉಣ್ಣದೊಡವೆಯುಗಳಿಸಿ : ಮಣ್ಣಿನೊಳು ತಾನಿರಿಸಿ
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ :
ಮಣ್ಣುಕಾಣಯ್ಯ : ಸರ್ವಜ್ಞ :

ಎಂದು ಬಲು ಮಾರ್ಮಿಕವಾಗಿ ನುಡಿದು ಶಿಕ್ಷಣದ ಸುಧೆಯ ಸಾರಸತ್ವವನ್ನೇ ಜೇಂ
ದ್ದಾನೆ.

ಧಾರ್ಮಿಕ ಕ್ಷೇತ್ರದತ್ತ ದೃಷ್ಟಿ ಹಾಯಿಸಿ ಸರ್ವಜ್ಞ ಕಣ್ಣು ತೆರೆಸಿದ್ದಾನೆ. ಬ್ರಹ್ಮಚರ್ಯೆಯನ್ನು ಯಾವ ರೀತಿಯಲ್ಲಿ ಸಾಗಿಸಬೇಕು, ಸತಿಪತಿಗಳಾಗಲೀ, ಗಂಡು ಹೆಣ್ಣಾಗಲೀ ಅವರ ನಡೆ–ನುಡಿಯು ಜೊತೆಗೆ ಅವರ ಒಂದು ಬಾಳ್ವೆ ಹೇಗಿದ್ದರೆ ಒಳಿತು ಎಂದು ಪರಮಾತ್ಮನಿಗೆ ಸಲ್ಲುತ್ತದೆಯೇ ಎಂಬುದನ್ನು ಬಿಚ್ಚುಮಾತಿನಿಂದ ಬಡಿದೆಬ್ಬಿಸಿದ್ದಾನೆ.

ಮುಟ್ಟಿದಂತಿರಬೇಕು: ಮುಟ್ಟದಲೇ ಇರಬೇಕು
ಮುಟ್ಟಿಯೂ ಮುಟ್ಟದಿರಬೇಕು, ಪರಸ್ತ್ರೀಯ
ಮುಟ್ಟಿದವ ಕೆಟ್ಟ ಸರ್ವಜ್ಞ::

ಎಂದು ಹೇಳುತ್ತಾನೆ ಸತಿಪತಿಗಳಾದರು ಹೇಗಿರಬೇಕು, ಪರಸ್ತ್ರೀಯಾಗಲಿ ಪರಪುರುಷನಾಗಲೀ ಇರಬೇಕ್ಹೇಗೆ ಎಂಬುದರ ಎಲ್ಲೆಯನ್ನು ಎದುರಿಗಿಟ್ಟಿದ್ದಾನೆ. ಸತಿಪತಿಯೂ ಕೂಡ, ಪತಿ ಸತಿಯನ್ನಾಗಲೀ, ಸತಿ ಪತಿಯನ್ನಾಗಲೀ ಆಳುವ ಒಡೆತನದ ಆಸೆಗೆ ಬಯಸುವ ಕ್ಷುಲ್ಲಕ ಗುಣಗಳಿರಬಾರದು. ಜೀವಿತದ ನೇಮದಲ್ಲಿ ನಿಲ್ಲಬೇಕು. ಎಂದರೆ ಮುಟ್ಟಿದಂತಿರಬೇಕು ಆದರೂ ಮುಟ್ಟದಲೆ ಇರುವುದು ಉಚಿತ. ಮುಟ್ಟಿಯೂ ಮುಟ್ಟದವನಂತೆ ಇರುವುದು ಮಹೋನ್ನತವಾದದ್ದು. ಅಲ್ಲದೇ ಪರಸ್ತ್ರೀಯ ಮುಟ್ಟಿದವ ಕೆಟ್ಟ ಸರ್ವಜ್ಞ ಎಂದು ಎಚ್ಚರಿಸಿದ್ದಾನೆ. ಇದು ಕಾಮಾತುರನಾದವನಿಗೆ ದಿವ್ಯ ಔಷಧಿ.

ಇಂತಹ ಈ ಒಂದು ಕ್ಷೇತ್ರವು ಈತನ ದೃಷ್ಟಿಕೋನಕ್ಕೆ ಬಿದ್ದಿಲ್ಲವೆನ್ನಲಾಗದು. ಎಲ್ಲ ವಲಯಗಳಲ್ಲೂ ಜ್ಞಾನದ ಕಣ್ಣಿನಿಂದ ಎಲ್ಲವನ್ನು ಅರಿತು ನುಡಿದ ಮೇಧಾವಿ. ಅಂತಲೇ ಆತನ ವಚನಗಳು ವೃತ್ತಿ ಶಿಕ್ಷಣದ ವರ್ತುಲದಲ್ಲಿಯೂ ಇವೆ. ಪ್ರಾಪಂಚಿಕ ಶಿಕ್ಷಣದ ವಿಶಾಲ ಅರ್ಥದಲ್ಲಿಯೂ ಅಡಗಿವೆ ಹೀಗೆಂದೇ ಆತ ಹೇಳಿದ್ದಾನೆ.—

ಎಲ್ಲ ಬಲ್ಲವರಿಲ್ಲ: ಬಲ್ಲವರು ಬಹಳಿಲ್ಲ:
ಬಲ್ಲಿದರಿಂದ್ದು ಬಲವಿಲ್ಲ: ಸಾಹಿತ್ಯ
ವೆಲ್ಲರಿಗಿಲ್ಲ: ಸರ್ವಜ್ಞ::

ಎಂದು ಅಂದಾಗ ಆತ ಸಾಹಿತ್ಯಸಾರಸ್ವತ ಜ್ಞಾನಸಂಪನ್ನತೆ ಎಂತಹ ಪವಿತ್ರವಾದದ್ದು ಎಂಬ ಅಂಶವನ್ನು ವರ್ಣಿಸಿರುವ ಅವನ ಜಾಣ್ಮೆಯ ನುಡಿಮುತ್ತುಗಳು ಅರ್ಥಪೂರ್ಣವಾದವುಗಳು. ಎಲ್ಲವನ್ನೂ ಬಲ್ಲವರಿಲ್ಲ ಸಂಪೂರ್ಣವಾಗಿ ತಿಳಿದವರು ಸಿಕ್ಕುವುದು ದುರ್ಲಭ, ಅಂದಾಗ ಎಲ್ಲವನ್ನೂ ಬಲ್ಲವರು ಬಹಳ ಇಲ್ಲ ಅಂದಿದ್ದಾನೆ.

ಒಂದು ವೇಳೆ ಬಲ್ಲವರಿದ್ದರೂ ಕೂಡ ಸಾಹಿತ್ಯಕ್ಕೆ ಎಂದಿರುವ ಆತನ ವಿಮರ್ಶಾ
ದೃಷ್ಟಿ ಮಹತ್ತರವಾದದ್ದು. ಎಂದಾಗ ಅಂದಿನ ಇಂದಿನ ಸಾಹಿತ್ಯಕ ಸ್ಥಿತಿಗತಿಗ
ಯಾವ ವ್ಯತ್ಯಾಸವನ್ನು ಕಾಣಬಹುದೆಂಬುದರ ಬಗ್ಗೆ ಇಂದು ಕ್ಷ ಕಿರಣವನ್ನು ಹ
ಬಹುದಾಗಿದೆ. ಅಷ್ಟೇ ಅಲ್ಲದೆ ಶಿಕ್ಷಣಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧವ
ತೋರಿಸಿ ಅವುಗಳಲ್ಲಿರುವ ವ್ಯತ್ಯಾಸವನ್ನು ಎತ್ತಿ ಹಿಡಿದಿದ್ದಾನೆ ಎಲ್ಲ ಬಲ್ಲವ
ಶಿಕ್ಷಣವನ್ನು ಅರಿತವನು, ಅದನ್ನು ಸಾಹಿತ್ಯರೂಪದಲ್ಲಿ ಬರೆದಿಡಬೇಕು. ಶಿಕ್ಷಣದಿ
ತನ್ನಲ್ಲಿ ಉದ್ಭವಿಸುವ ಪ್ರಚೋದನೆಯನ್ನು ವ್ಯಕ್ತಪಡಿಸಿ ಅದನ್ನು ಕೃತಿಯಲ್ಲಿ ಬ
ದಿಟ್ಟಲ್ಲಿ, ಅದು ಶಾಶ್ವತವಾಗಿ ಉಳಿದು ಯುವ ಪೀಳಿಗೆಯ ದಾರಿದೀಪವಾಗುತ್ತ
ಅಂತಹುದನ್ನು ಮಾಡುವುದು ಎಲ್ಲರಿಂದ ಸಾಧ್ಯವಿಲ್ಲ. ಸಾಹಿತ್ಯವು ಎಲ್ಲರಿಗೂ ಬ
ಲಾತದು ಎಂಬ ಮಾತನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾನೆ.

ಎಲ್ಲರಲ್ಲಿಯೂ ತಾನೊಬ್ಬ ಜ್ಞಾನಿ ತಿಳಿದವನು ಬಲ್ಲವನು ಎಂದು ಕೊಚ್ಚಿಕೊ
ದಿರು ಎಂಬಂತೆ ತಿಳಿದು ತಲೆಗೇರಿದ ಬಲ್ಲವರಿಗೆ ಸೂಕ್ಷ್ಮವಾಗಿ ಎಚ್ಚರಿಸುತ್ತಾನೆ ಸರ್ವ
ಮೂರ್ತಿ.

ಬಲ್ಲೆನೆಂಬುವ ಮಾತು; ಎಲ್ಲವು ಹುಸಿಕಾಣೋ:
ಬಲ್ಲರೆ ಬಲ್ಲೆನೆನಬೇಡ, ಸುಮ್ಮನಿರ
ಬಲ್ಲವನೆಬಲ್ಲ ಸರ್ವಜ್ಞ::

ಎಂದು ಹೇಳುತ್ತಾ, ಮಾನವನಲ್ಲಿ ಅಡಗಿದ ಬಲ್ಲೆನೆಂಬುದು ಅಹಂಭಾವ ಲಕ್ಷಣವೆಂದ
ತಿಳಿಸುತ್ತಾನೆ. ತಿಳಿದರೂ ತಿಳಿಯದಂತೆ ತುಂಬಿದ ಕೊಡವಿದ್ದಂತೆ ತೂಕಬದ್ಧವಾಗಿ
ವುದು ಹೆಚ್ಚಿನಲಿ ಹೆಚ್ಚೇದು, ಎತ್ತರದಲ್ಲಿ ಎತ್ತರವೆಂದು, ಸಾರಿ ಜನತೆಯ ಕಣ್ಣ
ತೆರೆಸಿ ಲೋಕ ಶಿಕ್ಷಣವನ್ನು ನೀಡಿ ಜ್ಞಾನಿಗಳನ್ನಾಗಿ ಮಾಡಿ ಉದ್ಧರಿಸಿದ ಮಹಾ
ನಿವನು. ಸರ್ವಸಂಪನ್ನ ಸನ್ಮಾರ್ಗಿ ಸರ್ವಜ್ಞ..

ಆತನೊಬ್ಬ ವಿರಾಗಿ ಪುರುಷ ಜಾತಿ–ಮತಗಳ ಗೊಂದಲದ ಸಿಲುಕಿಗೆ ಸಿಕ್ಕಿ
ದವನಲ್ಲ. ಪ್ರಪಂಚದಲ್ಲಿ ಮಾನವರಾಗಿ ಹುಟ್ಟಿಬಂದ ಮೇಲೆ ಎಲ್ಲರೂ ಒಂದೇ. ಅ
ಜಾತಿ ಈ ಜಾತಿ ಎನ್ನದೇ ಎಲ್ಲರೂ ನನ್ನವರು ಎಂದು ಬಾಳಿ ಬದುಕಿ, ಕೂಡಿ ಜೀವಿಸಿ
ಜೀವನದ ಸುಖವನ್ನರಿಯಬೇಕೆಂದು ಸಾರಿದವನು. ಅದುವೇ ನಿಜಜೀವನದ ಸಾಕ್ಷಾ
ತ್ಕಾರವೆಂದು ಅನೇಕ ಸಲ ನುಡಿಯುತ್ತಾನೆ ಇಂತಹ ಭಾವವನ್ನೊಳಗೊಂಡ–

ನಡೆವುದೊಂದೇ ಭೂಮಿ: ಕುಡಿವುದೊಂದೇ ನೀರು:
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ:
ನಡುವೆ ಎತ್ತಣದು? ಸರ್ವಜ್ಞ:

ಎಂಬ ವಚನವೇ ಸಾಕ್ಷಿ.

ವಿದ್ಯೆ ಜ್ಞಾನಾರ್ಜನೆಗೆ ಮೂಲ ಸಾಧನ. ಅದು ಮಾನವನ ಮೂರನೆಯ ಕಣ್ಣು. ಮನುಷ್ಯ ತನ್ನ ನಡತೆ-ಶೀಲ ಸದ್ಗುಣಗಳನ್ನು ಬೆಳೆಸಿಕೊಳ್ಳುತ್ತಾನೆಂದರೆ ಅದು ವಿದ್ಯೆಯಿಂದಲೇ ಸಾಧ್ಯವೆನ್ನುತ್ತಾ ಮಾನವನ ನಿಜವಾದ ಅರ್ಥವನ್ನು ಎತ್ತಿತೋರಿಸುವ ಶಕ್ತಿ ವಿದ್ಯೆ ಎಂದಿದ್ದಾನೆ. ಮಾನವನಿಗೂ ಪಶುಪಕ್ಷಿಗಳಿಗೂ ವ್ಯತ್ಯಾಸವನ್ನು ತೋರಿಸುವ ಸರಳ ಶುದ್ಧ ಸಾಧನೆಯೇ ವಿದ್ಯೆ. ಮನುಷ್ಯ ಏನೆಲ್ಲ ಗಳಿಸಬಹುದು. ಅದನ್ನು ಕೊನೆಯುತನಕ ತನ್ನದಾಗಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತು. ತಾನು ಗಳಿಸಿದ ಧನಕನಕ ಭೂಮಿ ಸರ್ವಸಂಪತ್ತನ್ನು ತಾನಿರುವ ತನಕ ಅನುಭವಿಸಿ ಸುಖದ ಸೋಪಾನದಲ್ಲಿ ತೇಲಿ ಅಂತೆಯೇ ಕೊನೆಗೊಂದು ದಿನ ಇಹಲೋಕ ತ್ಯಜಿಸಿದಾಗ ಅದು ಉಳಿಯುತ್ತದೆಯೆಲ್ಲಿ? ಅವನೊಡನೆ ಅದು ಹೋಗಲಾರದು. ಧನಕನಕಸಂಪತ್ತನ್ನು ಒಬ್ಬನಿಂದ ಮತ್ತೊಬ್ಬನಿಗೆ ವರ್ಗಾಯಿಸಿ, ಕಸಿದುಕೊಳ್ಳುವ ಸಂದರ್ಭಗಳುಂಟಾದರೂ, ಕಲಿತ ವಿದ್ಯೆ ಕೊನೆಗೆ ಬರುವುದು ಜೊತೆಯಲ್ಲಿಯೇ ಮಾತ್ರ. ಅದನ್ನು ಯಾರೂ ಕಸಿದು ಕೊಳ್ಳಲಾರರು. ಅಷ್ಟೇ ಅಲ್ಲ ಆ ವ್ಯಕ್ತಿ ಮಣ್ಣಸೇರಿ ಮಣ್ಣಾದರೂ ವಿದ್ಯೆ ಮಣ್ಣಾಗದು. ಮತ್ತಷ್ಟು ಪ್ರಕಾಶವಾಗಿ ಅದು ಬೆಳಗುತ್ತದೆ. ಅವನಲ್ಲಿ ಅಡಗಿದ ಒಳ್ಳೆಯ ಗುಣವನ್ನು ಮೆರೆಸುತ್ತದೆ. ಕೊಂಡಾಡಿಸಿ ಉನ್ನತ ಶಿಖರಕ್ಕೇರಿಸಿ ಆತನೊಬ್ಬ ಗಣ್ಯನೆಂದೆನ್ನಿಸಿ ಇತಿಹಾಸ ಪುಟಗಳಲ್ಲಿ ಶಾಶ್ವತ ಕಹಳೆಯನ್ನು ಮೊಳಗಿಸುತ್ತದೆ. ಕಲಿತ ವಿದ್ಯೆ ಆತನ ಜೊತೆಯಲ್ಲಿಯೂ ಹೋಗುತ್ತದೆ, ಇಹದಲ್ಲಿಯೂ ಉಳಿಯುತ್ತದೆ. ಇದು ವಿದ್ಯೆಯ ಉನ್ನತ ವೈಶಿಷ್ಟ್ಯ. ಅಂತೆಯೇ ಈ ಸರ್ವಜ್ಞ ಮಹಾಮೂರ್ತಿಯ ಚಿತ್ತ ಇತ್ತ ಹರಿದಿರಬೇಕು. ಹಾಗೆಂದೇ ಹೇಳಿರಬೇಕು.

> ಒಡಲೊಳಡಗಿದ ವಿದ್ಯೆ : ಒಡಗೂಡಿ ಬರುತಿರಲು :
> ಒಡಹುಟ್ಟಿದವರು; ಕಳ್ಳರು, ನೃಪರದನು :
> ಪಡೆಯರೆಂತೆಂದ ಸರ್ವಜ್ಞ :

ಎಂದು ಸಾರವತ್ತಾಗಿ ಎಂದಿದ್ದಾನೆ.

ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿಕೋಟಿ, ಆದರೆ ವಿದ್ಯೆಗಾಗಿ ಸತ್ತವನೊಬ್ಬನಿಲ್ಲ ಎಂದೂ ಹೇಳುತ್ತಾನೆ. ಅಂದಾಗ ಆತ ವಿದ್ಯೆಗೆ ನೀಡಿದ ಸ್ಥಾನ ಅತಿ ಎತ್ತರ ಮಟ್ಟದೆಂದು ಖಚಿತವಾಗಿ ತಿಳಿಯಬಹುದಾಗಿದೆ. ಅದನ್ನು ಆತನು ಭಕ್ತಿಭಾವದಿಂದ ಪೂಜಿತಸ್ಥಾನದಲ್ಲಿಟ್ಟು ಗೌರವಿಸಿದ್ದಾನೆಂಬುದು ಸ್ಪಷ್ಟ.

ವೇದ ಶಾಸ್ತ್ರಗಳನ್ನು ಜನಸಾಮಾನ್ಯರು ಓದಿ ಅರ್ಥೈಸಿಕೊಳ್ಳಲಸಾಧ್ಯವಾಗುತ್ತದೆ ಅವುಗಳನ್ನು ಪಂಡಿತರು ಮಾತ್ರ ಓದುತ್ತಿದ್ದರು. ಜನತೆಗೆ ಅದರ ಅರ್ಥವನ್ನು ಬಿಡಿಸಿ ಹೇಳಿ ಜನತೆಯ ಮನದ ಜ್ಞಾನದ ಕಣ್ಣನ್ನು ತೆರೆಸುತ್ತಿದ್ದರು. ಆದರೂ ನಿರಕ್ಷ

ರಸ್ಥ ಜನ ಎಷ್ಟು ಕೇಳಿ ಹೊಗಳಿದರೂ ವೇದೋಪನಿಷತ್ತುಗಳನ್ನು ಪಠಣಮಾಡಲಾಗು
ತ್ತಿರಲಿಲ್ಲ. ಆದರೆ ಸರ್ವಜ್ಞನ ವಚನಗಳು ಎಲ್ಲರ ಮನೆಮಾತಾಗಿವೆ ಮನದಲ್ಲಿ ನೆಲೆ
ಯೂರಿ ರಸದೂಟನೀಡುತ್ತವೆ. ಬದುಕಿನಲ್ಲಿ ಬೆರೆತುಹೋಗಿವೆ. ಒಂದೆರಡುಸಾರಿ ಕೇಳಿ
ಮನಸ್ಸಿನಲ್ಲಿ ಮೆಲುಕುಹಾಕಿದನೆಂದರೆ ಸರ್ವಜ್ಞನ ವಚನಗಳು ಸಮರಸವಾಗಿ ಅವನೆದೆ
ಯಲ್ಲಿ ಬೇರೂರುತ್ತವೆ. ಹೀಗೆ ಅನಕ್ಷರಸ್ಥನಲ್ಲಿಯೂ ಅಕ್ಷರತೆಯ ಅರಿವನ್ನು ಮೂಡಿಸಿ
ಅಂತರ್ಯವನ್ನು ಬೆಳಗಿಸುವ ಜ್ಞಾನದ ಕಣ್ಣನ್ನು ತೆರೆಸಿ ಸುಸಂಸ್ಕೃತನನ್ನಾಗಿ ಮಾಡುವ
ವಿದ್ಯೆಗೆ ಸಮನಾಗಿ ಶಿಕ್ಷಣಕ್ಕೆ ಸಾಟಿಯಾಗಿ ನಿಲ್ಲುತ್ತವೆ ಸರ್ವಸಾಮಾನ್ಯವಾದ ಸರ್ವ
ಜ್ಞನ ವಚನಗಳು. ಎಂದಮೇಲೆ ಆತ ನಿಜಕ್ಕೂ ನಮ್ಮ ಕನ್ನಡ ನಾಡಿನ ಶಿಕ್ಷಣಕ್ಷೇತ್ರಕ್ಕೆ
ನೀಡಿದ ಕೊಡುಗೆ ಅಪಾರವಾದುದು, ಅನಂತವಾದುದೆಂದು ನಿಚ್ಚಳವಾಗಿ ಹೆಚ್ಚಿಕೆ
ಯಿಂದ ಹೇಳಲೇಬೇಕು. ಇಂತಹ ಒಬ್ಬ ಧೀಮಂತ ಕವಿಪುಂಗನು ನಮ್ಮ ನಾಡಿನ
ನೆಲದಲ್ಲಿ ಹುಟ್ಟಿ ಬೆಳೆದು ಬಾಳಿದನೆಂದರೆ ನಮ್ಮ ಪುಣ್ಯಕ್ಕೆ ಸರಿಸಾಟಿಯಿಲ್ಲವೆಂದು
ಕನ್ನಡಿಗರು ಎದೆಯುಬ್ಬಿಸಿ ಹೇಳಬೇಕು. ಆತನ ವಚನಸಂಪತ್ತಿನಲ್ಲಿ ಅಡಗಿರತಕ್ಕ
ಅಮೃತತ್ತ್ವವನ್ನು ಅರಿತು, ಜೀವಿತದಲ್ಲಿ ಅಳವಡಿಸಿಕೊಂಡು ಬಾಳಿ ಬದುಕಿದಾಗ
ಮಾತ್ರ ಸರ್ವಜ್ಞನ ಸೇವಾ ಮನೋಭಾವಕ್ಕೆ ಕೃತಜ್ಞತಾಪೂರ್ವಕವಾಗಿ ಸ್ಮರಿಸಿದಂತಾ
ಗುತ್ತದೆ. ಆತ ನೀಡಿದ ಲೋಕ ಶಿಕ್ಷಣ ಸಾರ್ಥಕವಾಗುತ್ತದೆ.

ವೇದಗಳು ಹೇಗೆ ಅಪೌರುಷೇಯವೋ ಹಾಗೆಯೇ ಸರ್ವಜ್ಞನ ವಚನಗಳು
ಅಪೌರುಷೇಯ. ಲೋಕ ಶಿಕ್ಷಣಕ್ಕಾಗಿ ಮೀಸಲಿಟ್ಟ ಜಂಗಮ ವಿಶ್ವವಿದ್ಯಾಲಯ ಆತನ
ವಚನ ಸಂಪತ್ತು.

# ಭೂ ಸುಧಾರಣೆಗಳು ಮತ್ತು ಸಹಕಾರಿ ಬೇಸಾಯ

—ಡಿ. ವೆಂಕಟರಾವ್, ಎಂ. ಎ
“ಚಂದನ” ವಿದ್ಯಾನಗರ, ಹಾಸನ

ನಮ್ಮ ದೇಶದಲ್ಲಿ ದುಡಿಯುತ್ತಿರುವ ಲಕ್ಷಾಂತರ ಮಂದಿ ಗೇಣಿದಾರರನ್ನು ರಕ್ಷಿಸಲು ಸರಕಾರ ಟೆನೆನ್ಸಿ ಕಾಯಿದೆಗಳನ್ನು ಜಾರಿಗೆ ತಂದಿದೆ. ಈ ಕಾಯಿದೆಗಳಲ್ಲಿ ರೈತರು ಕೊಡಬೇಕಾದ ಭೂ ಬಾಡಿಗೆಯನ್ನು ನಿರ್ದಿಷ್ಟ ಪಡಿಸಿರುವುದಲ್ಲದೆ ಅವರನ್ನು ಹೊಲಗಳಿಂದ ಬಿಡಿಸಿ ಭೂಮಿಯನ್ನು ಇತರರಿಗೆ ಕೊಡದಂತೆ ಕಾನೂನನ್ನು ಮಾಡಲಾಗಿದೆ. ಇದರ ಪ್ರಕಾರ ಭೂಮಿಯ ಒಡೆಯರು ಭೂಮಿಯನ್ನು ತಾವೇ ಸ್ವಂತವಾಗಿ ಸಾಗುವಳಿ ಮಾಡುವಂತಿದ್ದರೆ ಮಾತ್ರ ರೈತರಿಂದ ಬಿಡಿಸಿಕೊಳ್ಳಬಹುದು. ಆದರೆ ಈ ರೀತಿ ಪಡೆಯುವುದಕ್ಕೂ ಒಂದು ಮಿತಿಯನ್ನು ಹಾಕಲಾಗಿದೆ. ಇತ್ತೀಚಿಗೆ ಟೆನೆನ್ಸಿ ಕಾಯಿದೆಯು ರೈತರು ಭೂಮಿಯ ಉಳುಮೆ ಮಾಡುತ್ತಿದ್ದರೆ ಅವರಿಗೇ ಭೂಮಿಯನ್ನು ಕೊಡಬೇಕೆನ್ನುವ ಕಾನೂನನ್ನು ಜಾರಿಗೆ ತಂದಿದೆ. ಈಗೀಗ ಎಲ್ಲಾ ಸರಕಾರಗಳೂ ಈ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸುತ್ತಿವೆ. ಇದರಿಂದ ರೈತರಿಗೆ ಭೂಮಿ ಇಲ್ಲದ ಶ್ರಮಿಕರಿಗೆ ಬಹಳ ಮಟ್ಟಿಗೆ ನೆರವಾಗುವುದಲ್ಲದೆ ಭೂಮಿಯ ಹಂಚಿಕೆಯು ಸಮನಾಗಿ ಕೃಷಿ ಉತ್ಪಾದನೆಯು ಕ್ರಮೇಣ ಅಧಿಕಗೊಳ್ಳುವುದು.

ಕೃಷಿ ಉತ್ಪನ್ನ ಹೆಚ್ಚಬೇಕಾದರೆ ಜಮೀನಿನ ಹಿಡುವಳಿ ಆರ್ಥಿಕವಾಗಿರಬೇಕಾದುದು ಬಹಳ ಮುಖ್ಯ. ಆದರೆ ನಮ್ಮ ದೇಶದಲ್ಲಿ ಜಮೀನಿನ ಹಿಡುವಳಿಗಳು ಆರ್ಥಿಕವಾಗಿಲ್ಲ. ಜಮೀನಿನ ಹಿಡುವಳಿ ಎಂದರೆ ಒಬ್ಬ ರೈತನು ಸಾಗುವಳಿ ಮಾಡುವ ಜಮೀನಿನ ವಿಸ್ತಾರ. ಭಾರತದಲ್ಲಿ ನೂರಾರು ವರ್ಷಗಳಿಂದ ಪಿತ್ರಾರ್ಜಿತವಾದ ಭೂಮಿಯು ಹಂಚಿಕೆಯಾಗುತ್ತಾ ಬಂದಿರುವುದರಿಂದ ಪ್ರತಿಯೊಬ್ಬ ರೈತನ ಭೂಮಿ ಕಡಿಮೆಯಾಗುತ್ತಾ ಹೋಗಿದೆ. ಈ ರೀತಿಯ ವಿಭಜನೆಯಿಂದ ಜಮೀನಿನ ಹಿಡುವಳಿ ತುಂಬಾ ಕಡಿಮೆಯಾಗುವುದಲ್ಲದೆ ಕೃಷಿ ಉತ್ಪನ್ನವೂ ಕುಂಠಿತಗೊಳ್ಳುತ್ತದೆ. ಜಮೀನಿನ ಭಿನ್ನ ಭಿನ್ನತೆ ಮತ್ತು ಹಿಡುವಳಿಯ ವಿಭಜನೆಗೆ ಅನೇಕ ಕಾರಣಗಳಿವೆ. ಪಿತ್ರಾರ್ಜಿತ ಆಸ್ತಿಯ ಬಗ್ಗೆ ಬೆಳೆದು ಬಂದಿರುವ ಅಂಧ ಪ್ರೇಮ, ದಿನೇ ದಿನೇ ಭೂಮಿಯನ್ನು ಅವಲಂಬಿಸುವವರ ಸಂಖ್ಯೆ ವೃದ್ಧಿಯಾಗುತ್ತಿರುವುದು, ಅವಿಭಕ್ತ ಕುಟುಂಬ ಪದ್ಧತಿ ನಶಿಸುತ್ತಿರುವುದು, ಹಳ್ಳಿಯ ಸಾಹುಕಾರರು ಸಾಲದ ನೆಪದಲ್ಲಿ ರೈತರ

ಭೂಮಿಯ ಒಂದೊಂದೇ ಭಾಗವನ್ನು ವಶಪಡಿಸಿಕೊಳ್ಳುವುದು. ಇತ್ಯಾದಿ. ಎಲ್ಲಾ ಕಾರಣಗಳು ನಮ್ಮ ದೇಶದ ಕೃಷಿಯ ಹಿಂದುಳಿಯುವಿಕೆಗೆ ಎಡೆಮಾಡಿಕೊಟ್ಟಿವೆ. ಭೂಹಿಡುವಳಿಗಳು ಸಣ್ಣವಾದರೆ ಆಧುನಿಕ ಯಂತ್ರೋಪಕರಣಗಳನ್ನು ಬಳಸಲಾಗುವುದಿಲ್ಲ. ಹಿಡುವಳಿಗಳು ಹಳ್ಳಿಯಲ್ಲೆಲ್ಲಾ ಚೆಲ್ಲಾಪಿಲ್ಲಿಯಾಗಿದ್ದರೆ ರೈತರು ಕೃಷಿಯನ್ನು ವ್ಯವಸ್ಥಿತ ರೀತಿಯಲ್ಲಿ ಕೈಗೊಳ್ಳುವುದು ಅಸಾಧ್ಯವಾಗುತ್ತದೆ. ಅವರ ವೇಳೆಯೆಲ್ಲವೂ ವೃಥಾ ಅಲ್ಲಿಂದಿಲ್ಲಿಗೆ ಓಡಾಡುವುದರಲ್ಲೇ ಕಳೆದುಹೋಗುತ್ತದೆ. ಹಿಡುವಳಿಗಳು ಸಣ್ಣದಾಗಿದ್ದರೆ ಖರ್ಚು ಹೆಚ್ಚಿ ತಗುಲಿ ನಷ್ಟ ಸಂಭವಿಸುತ್ತವೆ. ರೈತರು ಎಷ್ಟೇ ಕಷ್ಟಪಟ್ಟು ದುಡಿದರೂ ಹೆಚ್ಚು ಬೆಳೆಯನ್ನು ಪಡೆಯಲಾಗುವುದಿಲ್ಲ. ಸಣ್ಣ ಜಮೀನುಗಳಲ್ಲಿ ಬಾವಿ ಕಟ್ಟುವುದು, ಹೊಲದ ಸುತ್ತ ಬೆಳೆಹಾಳಾಗದಿರಲು ಬೇಲಿ ಕಟ್ಟುವುದು, ದನಕರುಗಳಿಗೆ ಶೆಡ್ಡುಗಳನ್ನು (Ca ttle sheds) ನಿರ್ಮಿಸುವ ಕಾರ್ಯಗಳಿಗೆ ಅಡ್ಡಿಯಾಗುವುದು. ಅಲ್ಲದೆ ರೈತರ ಜೀವಶಕ್ತಿ, ಹಣವೆಚ್ಚ ಮತ್ತು ಕೃಷಿಗೆ ಆಧಾರವಾಗಿರುವ ಹಾಗೂ ತಾಳ್ಮೆಯ ಅವತಾರವಾಗಿರುವ ದನಕರುಗಳ ಶಕ್ತಿಯೂ ವ್ಯರ್ಥವಾಗುತ್ತದೆ. ಇದರಿಂದ ರೈತರ ಉತ್ಸಾಹ ಕುಗ್ಗುತ್ತದೆ.

ಇವಕ್ಕೆ ಪರಿಹಾರೋಪಾಯದ ಮಾರ್ಗವೆಂದರೆ ಮೊದಲನೆಯದಾಗಿ ಆರ್ಥಿಕ ಹಿಡುವಳಿಗಳನ್ನು ಸೃಷ್ಟಿಸುವುದು 2) ಸಹಕಾರಿ ಬೇಸಾಯ. ಆರ್ಥಿಕ ಹಿಡುವಳಿ ಎಂದರೆ ತುಂಡು ಹೊಲಗಳ ಜೋಡಣೆ, ವ್ಯಕ್ತಿಯ ಯಶಸ್ಸಿಗೂ ಮತ್ತು ರಾಷ್ಟ್ರದ ಅಭ್ಯುದಯಕ್ಕೂ ಪೂರ್ತಿಯಾಗಿ ನೆರವಾಗುವ ಭೂಮಿಯ ವಿಸ್ತಾರ. ಆರ್ಥಿಕ ಹಿಡುವಳಿಯನ್ನು ಸೃಷ್ಟಿಸಿ ರೈತರಿಗೆ ಒಂದೇ ಕಡೆ ಭೂಮಿಯನ್ನು ಒದಗಿಸಿದರೆ ಅವರು ವಿಶ್ವಾಸದಿಂದ, ತಮ್ಮ ದೃಢಕಾಯದ ತೋಳುಗಳ ಬಲದಿಂದ ಬೆವರು ಹರಿಸಿ ಮೊದಲು ಬೆಳೆಯುವ ಕಡೆ ನೂರು ಬೆಳೆಯುತ್ತಾರೆ. ಭೂಮಿಯ ಛಿನ್ನಭಿನ್ನತೆಯನ್ನು ಸರಿಪಡಿಸಲು ಕೈಗೊಳ್ಳಬಹುದಾದ ಇನ್ನೊಂದು ಕಾರ್ಯವೆಂದರೆ ಒಬ್ಬ ರೈತನ ಜಮೀನು ಅಲ್ಪ ಸ್ವಲ್ಪವಿದ್ದು ನಾಲ್ಕಾರು ಕಡೆಗಳಲ್ಲಿ ಹಂಚಿಹೋಗಿದ್ದರೆ ಆ ಪ್ರದೇಶಗಳಲ್ಲಿರುವ ಅಕ್ಕ ಪಕ್ಕದ ನೆರೆಯ ಜಮೀನನ್ನು ಅದಲು ಬದಲು ಮಾಡಲು ಮಾಡಿಕೊಂಡು ಹಿಡುವಳಿಗಳನ್ನು ಹೆಚ್ಚಿಸುವುದು. ಈ ಕಾರ್ಯ ಪಂಜಾಬ ದೇಶದಲ್ಲಿ ಕಾರ್ಯರೂಪಕ್ಕೆ ಬಂದು ಪ್ರಗತಿಯನ್ನು ಹೊಂದಿದೆ. ಆರ್ಥಿಕ ಹಿಡುವಳಿಯ ಕ್ರಮವನ್ನು ಜಾರಿಗೆ ತರುವಲ್ಲಿ ನಮ್ಮ ದೇಶ ಇತ್ತೀಚೆಗೆ ಸ್ವಲ್ಪ ಮಟ್ಟಿಗೆ ಪ್ರಗತಿಯನ್ನು ಹೊಂದಲಾಗಿದೆ. ಆದರೆ ಆರ್ಥಿಕ ಹಿಡುವಳಿಗಳನ್ನು ಸೃಷ್ಟಿಸಿ ಬಿಟ್ಟ ಮಾತ್ರಕ್ಕೆ ನಮ್ಮ ಕರ್ತವ್ಯ ಮುಗಿಯಲಿಲ್ಲ. ಅದನ್ನ ಮುಂದೆ ಉಳಿಸಿಕೊಳ್ಳಬೇಕಾದ್ದು ಅತಿ ಮುಖ್ಯ. ಇದಕ್ಕಾಗಿ ಭೂಮಿಯ ವಿಷಯದಲ್ಲಿ ಹಕ್ಕುದಾರಿಕೆಯ ನಿಯಮಗಳನ್ನು ಬದಲಿಸಬೇಕು. ಮನೆಯಲ್ಲಿ ಹುಟ್ಟಿದ ಎಲ್ಲಾ ಗಂಡು ಮಕ್ಕಳು ಒಂದೇ ಕಸುಬನ್ನು ಅವಲಂಬಿಸುವ ಬದಲು ಹಿರಿಯ ಮಗನಿಗೆ ಮಾತ್ರ ಜಮೀನಿನ ಹಕ್ಕು ದಾರಿಕೆಯನ್ನು

ರಹಿಸಿ ಉಳಿದ ಮಕ್ಕಳಿಗೆ ಇತರ ಕಸುಬುಗಳನ್ನು ಮಾಡಿಕೊಡುವುದು ಸೂಕ್ತ. ಇದ
ಲ್ಲದೆ ಒಂದು ಕನಿಷ್ಟ ಮಟ್ಟಕ್ಕಿಂತಲೂ ಜಮೀನಿನ ವಿಭಜನೆಯಾಗಕೂಡದೆಂದು ನಿಯ
ಮವನ್ನು ಜಾರಿಗೆ ತಂದರೆ ಒಳ್ಳೆಯದು.

ಪ್ರತಿಯೊಬ್ಬ ಕೃಷಿ ಕಾರ್ಮಿಕನಿಗೂ ಇರಬೇಕಾದ ಭೂಮಿಗೆ ಒಂದು ಕನಿಷ್ಠ
ಮಿತಿಯ ವಿಸ್ತಾರವಿರುತ್ತದೆ. ಇದನ್ನು ಮೂಲ ಹಿಡುವಳಿ ಎಂದು ಕರೆಯುತ್ತಾರೆ.
ಅದೇ ರೀತಿಯಲ್ಲಿ ಜಮೀನಿನ ವಿಸ್ತಾರಕ್ಕೂ ಒಂದು ಕನಿಷ್ಟ ಮಿತಿ ಇರುತ್ತದೆ.
ಇದಕ್ಕೆ ಗರಿಷ್ಠ ಹಿಡುವಳಿ(Optimum holding)ಎನ್ನುತ್ತಾರೆ. ಭೂ ಸುಧಾ
ರಣೆಗಳ ಮತ್ತೊಂದು ಮುಖ್ಯ ಅಂಶವೆಂದರೆ ಭೂ ಹಿಡುವಳಿಗಳ ಮೇಲೆ ಗರಿಷ್ಠ ಮಿತಿ
ಯನ್ನು ನಿರ್ಧರಿಸುವುದು ಇದರ ಪ್ರಕಾರ, ಹಿಡುವಳಿಯ ಗರಿಷ್ಠ ಮಿತಿಯನ್ನು ಗೊತ್ತು
ಪಡಿಸಿ ಅದಕ್ಕಿಂತ ಹೆಚ್ಚಿಗೆ ಭೂಮಿ ಪಡೆದಿರುವ ರೈತರಿಂದ ಉಳಿದ ಭೂಮಿಯನ್ನು
ಪಡೆದುಕೊಂಡು, ಅದನ್ನು ಸಣ್ಣ ರೈತರಿಗೂ ಭೂಮಿ ಇಲ್ಲದ ರೈತರಿಗೂ ಹಂಚುವುದು
1961–62 ರಿಂದ ನಮ್ಮ ದೇಶದಲ್ಲಿ ಎಲ್ಲಾ ರಾಜ್ಯಗಳೂ ಗರಿಷ್ಠ ಮಿತಿಯ ಕಾಯಿದೆ
ಗಳನ್ನು ಪಾಸುಮಾಡಿವೆ. ಭಾರತದಲ್ಲಿ ಭೂಮಿಯ ಹಂಚಿಕೆಯು ಸಮನಾಗಿಲ್ಲ.
ಕೆಲವರು ದೊಡ್ಡ ಹಿಡುವಳಿಗಳನ್ನು ಹೊಂದಿದ್ದರೆ ಇನ್ನು ಕೆಲವು ರೈತರು ಅತಿ ಸಣ್ಣ
ಹಿಡುವಳಿಗಳನ್ನು ಹೊಂದಿದ್ದಾರೆ. ಮತ್ತೆ ಕೆಲವರಿಗೆ ಭೂಮಿಯೇ ಇಲ್ಲ. ಈ ಅಸ
ಮಾನತೆಯನ್ನು ಹೋಗಲಾಡಿಸಿ, ಭೂ ರಹಿತ ರೈತರಿಗೆ ಜಮೀನನ್ನು ಒದಗಿಸಲು,
ಸಣ್ಣ ಹಿಡುವಳಿದಾರರಿಗೆ ಅವರ ಜೀವನೋಪಾಯಕ್ಕಾಗುವಷ್ಟು ಜಮೀನು ಒದಗಿಸಿ
ಕೊಡಲು ಭೂ ಹಿಡುವಳಿಗಳ ಮೇಲೆ ಗರಿಷ್ಠ ಮಿತಿಯು ಅವಶ್ಯವಾಗಿದೆ. ಇದಲ್ಲದೆ
ಸಾಮಾಜಿಕ ದೃಷ್ಠಿಯಿಂದಲೂ ಈ ಮಿತಿಯು ಅಗತ್ಯವಾಗಿದೆ. ಸಮಾಜದಲ್ಲಿ ಭೂ
ರಹಿತ ರೈತರು ಹೆಚ್ಚು ಭೂಮಿಯನ್ನು ಪಡೆದ ರೈತರಿಂದ ಅಲಕ್ಷಿಸಲ್ಪಡುತ್ತಾರೆ.
ಅವರು ಅಲ್ಪ ಸ್ವಲ್ಪ ಗೌರವ ಪಡೆದು ನೆಮ್ಮದಿಯ ಬಾಳು ಸಾಗಿಸಬೇಕಾದರೆ,
ಗ್ರಾಮಪ್ರಾಂತರ ಪ್ರದೇಶಗಳಲ್ಲಿ ರೈತರ ಮಧ್ಯೆ ಸೌಹಾರ್ದಯುತ ಸಂಬಂಧವಿರಬೇಕಾದರೆ,
ಪ್ರತಿಯೊಬ್ಬರಿಗೂ ಭೂಮಿ ಇರಬೇಕು. ಇದಕ್ಕೆ ಭೂಮಿಯ ಮರು ಹಂಚಿಕೆಯಾಗ
ಬೇಕು. ಇದರಿಂದ ಉದ್ಯೋಗಗಳೂ ನಿರ್ಮಾಣಗೊಳ್ಳುತ್ತವೆ. ಈ ರೀತಿ ಆರ್ಥಿಕ
ಸಾಮಾಜಿಕ ದೃಷ್ಟಿಯಿಂದ ಹಾಗೂ ಕೃಷಿ ಕಾರ್ಮಿಕರಿಗೆ ಉದ್ಯೋಗಗಳನ್ನು ಒದಗಿಸಿ
ಸಮಾಜದಲ್ಲಿ ಅವರಿಗೂ ಸ್ಥಾನವಿದೆ ಎಂಬುದನ್ನು ತೋರಿಸಲು ಭೂ ಹಿಡುವಳಿಗಳ
ಮಿತಿಯಿಂದ ಕೃಷಿ ಉತ್ಪಾದನೆಯನ್ನು ಹೆಚ್ಚಿಸಬಹುದು. ಹೆಚ್ಚು ಭೂಮಿಯನ್ನು
ಹೊಂದುವ ರೈತರು ತಾವೇ ಸ್ವತಃ ಭೂಮಿಯನ್ನು ದಕ್ಷತೆಯಿಂದ ಉಳುಮೆ ಮಾಡ
ಲಾಗುವುದಿಲ್ಲ. ಇದರಿಂದ ಕೃಷಿಉತ್ಪಾದನೆ ಕಡಿಮೆಯಾಗುವುದು. ಇದೇ ರೀತಿ
ಕಡಿಮೆ ಭೂಮಿಯನ್ನು ಹೊಂದಿರುವ ರೈತರು ಹಾಗೂ ಕೃಷಿ ಕಾರ್ಮಿಕರು ಪರಿಣಾಮ
ಕಾರಿಯಾಗಿ ಕೃಷಿಯನ್ನು ಕೈಗೊಳ್ಳಲಾರರು. ಆದ್ದರಿಂದ ಇಂತಹವರಿಗೆ ಹೆಚ್ಚಿನ

ಭೂಮಿಯನ್ನು ಹಾಗೂ ಸುಲಭ ಬಡ್ಡಿಗೆ ಸಾಲ, ಉತ್ತಮ ಬೀಜಗಳು, ರಾಸಾಯ
ಗೊಬ್ಬರಗಳು ಇತ್ಯಾದಿಗಳನ್ನು ಒದಗಿಸಿದರೆ ಅವರು ತೀಕ್ಷ್ಣ ಬೇಸಾಯವನ್ನು
ಗೊಂಡು ಕೃಷಿ ಉತ್ಪನ್ನವನ್ನು ಅಧಿಕಗೊಳಿಸಬಲ್ಲರು. ಈ ರೀತಿ ಭೂ ಹಿಡು
ಮಿತಿಯು ನಾಡಿನ ಅಭ್ಯುದಯಕ್ಕೆ ಒಂದು ಮುಖ್ಯ ಅಡಿಗಲ್ಲಾಗಿದೆ.

ಇದರೊಂದಿಗೆ, ಕೃಷಿ ಉತ್ಪಾದನೆಯನ್ನು ಅಧಿಕಗೊಳಿಸಲು ಹಾಗೂ ಸ
ಹಿಡುವಳಿಗಳ ತೊಂದರೆಗಳನ್ನು ನಿವಾರಿಸಲು ಸಹಕಾರಿ ಬೇಸಾಯ ಪದ್ಧತಿಯನ
ಅನುಷ್ಠಾನಕ್ಕೆ ತರುವುದು ಒಳ್ಳೆಯದು. ಈ ಪದ್ಧತಿಯು ಕೃಷಿ ಕ್ಷೇತ್ರದಲ್ಲಿ ಒಂ
ಮೈಲಿಗಲ್ಲಾಗಿದೆ ಎನ್ನಬಹುದು. ಕಡಿಮೆ ಜಮೀನುಳ್ಳ ರೈತರಿಗೆ ಸಹಕಾರಿ ಬೇ
ಯ ಪದ್ಧತಿಯು ವರಪ್ರಧಾನವಾಗಿದೆಯೆಂದರೆ ಅತಿಶಯೋಕ್ತಿ ಏನೂ ಇಲ್ಲ. ಸ
ಕಾರಿ ಬೇಸಾಯ ಪದ್ಧತಿಯನ್ನು ಅಂದರೆ ಕೃಷಿಯ ಕಾರ್ಯಗಳಿಗಾಗಿ ಭೂಮಿ ಯ
ವನ್ನೂ ಒಟ್ಟುಗೂಡಿಸಿ ಸಾಗುವಳಿ ಮಾಡಿದರೆ ಆಹಾರ ಧಾನ್ಯಗಳೆಲ್ಲ ಹೆಚ್ಚಿನ ಉತ್ಪ
ಯಾಗುವುದಲ್ಲದೆ ರೈತರ ಆರ್ಥಿಕ ಸ್ಥಿತಿಯೂ ಸುಧಾರಿಸುವುದರಲ್ಲಿ ಸಂಶಯವಿ
ಇದರಿಂದ ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಭದ್ರತೆಯೂ ಉತ್ತಮಗೊಳ್ಳ
ದಕ್ಕೆ ಸಹಾಯವಾಗುತ್ತದೆ. ಆದ್ದರಿಂದ ರೈತರು ಭೂಮಿಯ ಮೇಲೆ ಒಡೆತನ
ಹಕ್ಕನ್ನು ಬಿಟ್ಟುಕೊಟ್ಟು ತಮ್ಮ ಯಂತ್ರೋಪಕರಣಗಳನ್ನು ದನಕರುಗಳನ್ನು ಒಟ
ಗೂಡಿಸಿ ಸಾಗುವಳಿಯಲ್ಲಿ ಒಟ್ಟಿಗೆ ನಿರತರಾಗಬೇಕು. ಆದರೆ ಇಲ್ಲಿ ಗಮನಿಸಬೇಕಾ
ಒಂದು ಮುಖ್ಯ ಅಂಶವೆಂದರೆ ರೈತ ತನ್ನ ಜೀವನಾಡಿಯಾಗಿರುವ, ಬದುಕಿನ ಸರ್ವ
ವಾಗಿರುವ ಭೂಮಿಯನ್ನು ಕೊಡಲು ಸಿದ್ಧನಾಗುವನೇ ಎನ್ನುವುದು. ಈ ಕಾರ
ದಿಂದಾಗಿಯೇ ನಮ್ಮ ದೇಶದಲ್ಲಿ ಈ ಪದ್ಧತಿ ಅಷ್ಟೊಂದು ಜನಪ್ರಿಯವಾಗಿಲ್ಲ. ಇ
ರಿಂದಾಗಿಯೇ ನಮ್ಮ ರೈತರು ಬಡತನದ ವಿಷ ಚಕ್ರದಿಂದ ಹೊರ ಬರುವುದು ಇನ
ಸಾಧ್ಯವಾಗಿಲ್ಲ. ಇಂದು ನಮ್ಮ ರೈತರು ಉಂಡುಟ್ಟು ಸುಖವಾಗಿರಬೇಕಾದರೆ, ಅ
ತಾಪತ್ರಯಗಳ ನಿವಾರಣೆಯಾಗಬೇಕಾದರೆ, ಅವರ ಬಾಳು ಹಸನಾಗಿ ದೇಶದ ಉದ
ರವಾಗಬೇಕಾದರೆ, ಸಹಕಾರಿ ಬೇಸಾಯ ಪದ್ಧತಿಯಿಂದ ಮಾತ್ರ ಸಾಧ್ಯ. ಏಕೆಂ
ನಮ್ಮ ದೇಶದಲ್ಲಿ ಎಲ್ಲೆಲ್ಲೂ ಹೆಚ್ಚಾಗಿರುವ ತುಂಡು ಹೊಲಗಳಿಂದ ಕೃಷಿಯ ಮತ
ರಾಷ್ಟ್ರದ ಪ್ರಗತಿ ಅಸಾಧ್ಯ. ಅಲ್ಲದೆ ತುಂಡು ಹೊಲದ ರೈತನದು ವೈಯಕ್ತಿ
ಹೋರಾಟ. ಈ ಹೋರಾಟದಲ್ಲಿ ಅವನು ಗೆಲ್ಲುವುದು ಬಹಳ ಕಷ್ಟ. ಮಹಾ
ಗಾಂಧಿಯವರು ಒಂದೆಡೆ ಸಾಂದರ್ಭಿಕವಾಗಿ ಹೀಗೆ ಹೇಳಿದ್ದಾರೆ ನೂರು ತುಂ
ಗಳಲ್ಲಿ ಹಂಚಿ ಹೋಗಿರುವ ಭೂಮಿಯಲ್ಲಿ ಬೇಸಾಯ ಮಾಡುವುದಕ್ಕೆ ಬದಲು ನೂ
ಕುಟುಂಬಗಳು ಸಹಕಾರದ ತಳಹದಿಯ ಮೇಲೆ ಸಹಕಾರಿ ಬೇಸಾಯವನ್ನು ಕೈಗೊಂ
ಬಂದ ಉತ್ಪನ್ನವನ್ನು ತಮ್ಮೊಳಗೆ ಹಂಚಿಕೊಳ್ಳುವುದು ಒಳ್ಳೆಯದು ಇದು ನಿಜಕ
ಸತ್ಯವಾದ ಮಾತು. ಸಹಕಾರಿ ಬೇಸಾಯವು ಒಂದು ವಿಶಿಷ್ಟವಾದ, ಸ್ವತಂತ್ರವಾ

ಹಾಗೂ ಪ್ರಜಾ ಸತ್ತಾತ್ಮಕವಾದ ಒಂದು ಬೇಸಾಯ ಪದ್ಧತಿ. ಹಳ್ಳಿಯಲ್ಲಿರುವ ರೈತ
ಒಂದೆಡೆ ಗೂಡಿ ಸಹಕಾರಿ ಸಂಘವನ್ನು ಸ್ವಯಂ ಸ್ಫೂರ್ತಿಯಿಂದ ಸಾಧಿಸಿ ಕೊಳ್ಳುವುದು
ಇದರ ವೈಶಿಷ್ಟ್ಯ. ಅಂದರೆ ಸಹಕಾರಿ ಬೇಸಾಯ ಸಂಘವು ಭೂ ಹೀನರ ಅಥವಾ
ನಿರ್ಗತಿಕ ಚಿಕ್ಕ ಬೇಸಾಯಗಾರರ ಸಂಸ್ಥೆಯಾಗಿದೆ. ಈ ರೀತಿ ಸ್ಥಾಪಿಸಿದ ಸಂಘಕ್ಕೆ
ರೈತರೆಲ್ಲರೂ ತಮ್ಮ ಭೂಮಿಯನ್ನು ಕೊಟ್ಟು, ಜೊತೆಗೆ ತಮ್ಮ ಎತ್ತುಗಳು ಹಾಗೂ
ಬೇಸಾಯದ ಉಪಕರಣಗಳನ್ನು ತೊಡಗಿಸುವರು. ಸಂಘವು ಸಣ್ಣ ಸಣ್ಣ ಹಿಡುವಳಿ
ಗಳನ್ನು ವೈಜ್ಞಾನಿಕವಾಗಿ ವಿಂಗಡಿಸಿ, ದೊಡ್ಡ ಹಿಡುವಳಿಗಳನ್ನಾಗಿ ಮಾಡಿ ಸಾಗುವಳಿ
ಮಾಡುವುದು. ಎಲ್ಲ ರೈತರೂ ಸಂಘದ ಹೊಲಗಳಲ್ಲಿ ದುಡಿದು ಗೊತ್ತು ಪಡಿಸಿದ
ಕೂಲಿಯನ್ನು ಪಡೆಯುವರು. ಬಂದ ಬೆಳೆಯನ್ನು ಸಹಕಾರಿ ಮಾರಾಟ ಸಂಘಗಳ
ಮೂಲಕ ಮಾರಾಟ ಮಾಡಿ, ಬಂದ ಹಣದಲ್ಲಿ ವರ್ಷದ ಎಲ್ಲಾ ಖರ್ಚುಗಳನ್ನು ಕಳೆದು
ಉಳಿದ ಲಾಭವನ್ನು ರೈತರು ಹಂಚಿಕೊಳ್ಳುವರು. ಈ ರೀತಿ ತುಂಡು ಹೊಲಗಳನ್ನು
ಪಡೆದಿರುವ ರೈತರು ಒಂದಡೆ ಸೇರಿ ಒಟ್ಟಾಗಿ ಬೇಸಾಯ ಕೈಗೊಂಡರೆ, ಅವರು
ಒಬ್ಬಂಟಿಗರಾಗಿ ಸಾಧಿಸಲಾಗದ್ದನ್ನು ಲೀಲಾ ಜಾಲವಾಗಿ ಸಾಧಿಸ ಬಲ್ಲರು. ಸಹ
ಕಾರಿ ಬೇಸಾಯ ಪದ್ಧತಿಯಲ್ಲಿ ಉತ್ಪತ್ತಿಯನ್ನ ಹೆಚ್ಚಿಸಲು ಸಣ್ಣ ಸಣ್ಣ ಹಿಡುವಳಿಗಳನ್ನು
ಗೂಡಿಸಿದರೂ, ಭೂಮಿಯ ಒಡೆತನದಲ್ಲಿ ಮಾತ್ರ ಯಾವ ಬಗೆಯ ಪರಿವರ್ತನೆಯೂ
ಆಗುವುದಿಲ್ಲ ರೈತನ ವೈಯಕ್ತಿಕ ಒಡೆತನವನ್ನು ರದ್ದುಗೊಳಿಸದೆ ದೊಡ್ಡ ಪ್ರಮಾಣ
ದ ಸಾಗುವಳಿ ಪದ್ಧತಿಯ ಎಲ್ಲಾ ಬಗೆಯ ಅನುಕೂಲಗಳನ್ನು ಮಾಡಿಕೊಡುತ್ತದೆ.
ಸಹಕಾರಿ ಬೇಸಾಯ ಸಂಘಗಳು ರೈತರಿಗೆ ವಿರಾಮ ಕಾಲದಲ್ಲಿ ಗ್ರಾಮೋದ್ಯೋಗಗಳನ್ನು
ಒದಗಿಸುತ್ತದೆ. ಇದರಿಂದ ಸಣ್ಣ ರೈತರ ಆದಾಯ ಹೆಚ್ಚಿ ಅವರ ಆರ್ಥಿಕ ಸ್ಥಿತಿ ಸುಧಾ
ರಿಸುತ್ತದೆ ಜೀವನ ಮಟ್ಟ ಹೆಚ್ಚುತ್ತದೆ. ಪರಿಣಾಮವಾಗಿ ಆಹಾರದಲ್ಲಿ ರಾಷ್ಟ್ರವು
ಸ್ವಾವಲಂಬಿಯಾಗಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು ಸಾಧ್ಯ. ಸಹಕಾರಿ
ಬೇಸಾಯ ಪದ್ಧತಿಯಲ್ಲಿ ಹೆಚ್ಚು ಹೆಚ್ಚು ನವೀನ ಉಪಕರಣಗಳನ್ನು ಉಪಯೋಗಿಸಿ
ಆಧುನಿಕ ಕೃಷಿ ಕೈಗೊಂಡು ಅಧಿಕ ಉತ್ಪತ್ತಿಯನ್ನು ಪಡೆಯಬಹುದು. ಹೇಗೆಂದರೆ,
ಸಹಕಾರಿ ಬೇಸಾಯದಿಂದ ಉಳುಮೆ ಮಾಡುವುದರಿಂದ ಭೂಮಿಯನ್ನು ಉತ್ಕೃಷ್ಟ
ವಾಗಿಯೂ, ಪರಿಣಾಮಕಾರಿಯಾಗಿಯೂ ಉಪಯೋಗಿಸಬಹುದು. ಅಂದರೆ ಅಧಿಕ
ಬಂಡವಾಳ, ಉತ್ತಮ ಸಲಕರಣೆಗಳು ಮತ್ತು ಬೀಜಗಳು, ನೀರಾವರಿ ಸೌಕರ್ಯ
ಇತ್ಯಾದಿಗಳ ಉಪಯೋಗದಿಂದ ಭೂಮಿಯ ಉತ್ಪಾದನೆಯನ್ನು ಅಧಿಕಗೊಳಿಸಬಹುದು
ಸಹಕಾರಿ ಬೇಸಾಯ ಪದ್ಧತಿಯಲ್ಲಿ ಯಾರೊಬ್ಬರ ಲಾಭವೂ ಮುಖ್ಯವಲ್ಲ ಸಮಾನ
ಹಂಚಿಕೆಯೇ ಇದರ ಮುಖ್ಯಧ್ಯೇಯ. ರೈತರ ಶ್ರಮಕ್ಕೆ ತಕ್ಕ ಫಲ ದೊರಕಿಸುವಲ್ಲಿ
ಸಹಕಾರಿ ಬೇಸಾಯ ಪದ್ಧತಿಯು ಒಂದು ಪರಿಣಾಮಕಾರಿ ಸಾಧನವಾಗಿದೆ. ರೈತರ
ಉತ್ತಮ ಬದುಕಿಗೆ ದಾರಿ ತೋರಿಸುವ ದೀವಟಿಗೆಯಾಗಿದೆ. ಕೃಷಿ ಅಭಿವೃದ್ಧಿಯನ್ನು
ಸಾಧಿಸುವಲ್ಲಿ ಇದೊಂದು ವಾಸ್ತವಿಕ ಹೆಜ್ಜೆಯಾಗಿದ್ದು, ಚಿಕ್ಕ ಪುಟ್ಟ ಹಿಡುವಳಿದಾರರ

ಏಳಿಗೆಗೆ ಒಂದು ನವೀನ ಯೋಜನೆಯಾಗಿದೆ. ಸಹಕಾರಿ ಕ್ಷೇತ್ರದಲ್ಲಿ ಇದೊಂದು ಹೆಮ್ಮೆಯ ಸಾಧನೆಯಾಗಿದೆ. ಈ ಪದ್ಧತಿಯು ನಮ್ಮ ದೇಶದಲ್ಲಿ ಜನ ಪ್ರಿಯವಾದಲ್ಲಿ ರಾಷ್ಟ್ರ ಸಮೃದ್ಧವಾಗುವುದರಲ್ಲಿ ಸಂದೇಹವಿಲ್ಲ.

ನಮ್ಮ ದೇಶದಲ್ಲಿ ಇತ್ತೀಚೆಗೆ ಕೇಂದ್ರ ಸರ್ಕಾರ, ರಾಜ್ಯ ಸರಕಾರ ಹಾಗೂ ಯೋಜನಾ ಆಯೋಗವು ಸಹಕಾರ ಬೇಸಾಯ ಪದ್ಧತಿಯ ಬಗ್ಗೆ ಹೆಚ್ಚು ಪ್ರಸಾರ ಮಾಡಿ ಆಚರಣೆಗೆ ತರಲು ಪ್ರಯತ್ನಿಸುತ್ತಿದೆ. ಪ್ರದರ್ಶನಗಳ ಮೂಲಕ ರೈತರಿಗೆ ಸಹಕಾರಿ ಬೇಸಾಯದಿಂದಾಗುವ ಪ್ರಯೋಜನಗಳನ್ನು ಮನವರಿಕೆ ಮಾಡಿ ಕೊಡುತ್ತಿದೆ. ಇದರ ಮುಖ್ಯ ಉದ್ದೇಶ ಸಣ್ಣ ಸಣ್ಣ ಭೂ ಹಿಡುವಳಿಗಳ ರೈತರನ್ನು ರಕ್ಷಿಸುವುದರ ಮೂಲಕ ರಾಷ್ಟ್ರದ ಅಭ್ಯುದಯವನ್ನು ಜಾರಿಗೆ ತರುವ ಮೊದಲು ರೈತರಲ್ಲಿ ತೃಪ್ತಿಕರವಾದ ಸನ್ನಿವೇಶವನ್ನು ಮೂಡಿಸಬೇಕು. ಅನಕ್ಷರಸ್ತ ರೈತರಿಗೆ ವಯಸ್ಕರ ಶಿಕ್ಷಣ ಶಾಲೆಗಳ ಮೂಲಕ ಸಹಕಾರಿ ಬೇಸಾಯದ ಬಗ್ಗೆ ತರಬೇತಿ ಕೊಡಬೇಕು. ಸರಕಾರವು ಕಂದಾಯ ವಸೂಲಿ ಮಾಡುವಾಗ ರಿಯಾಯಿತಿ ತೋರಿಸಬೇಕು. ನೀರಾವರಿ ಸೌಕರ್ಯ ಹಾಗೂ ಹಣವನ್ನು ಸಾಲದ ರೂಪದಲ್ಲಿ ಕೊಡಬೇಕು. ಆಗಲೇ ನಮ್ಮ ಸಮಸ್ಯೆಗಳಾದ ದಾರಿದ್ರ್ಯ, ಹಸಿವು, ನಿರುದ್ಯೋಗಗಳನ್ನು ನಿರ್ಮೂಲಗೊಳಿಸಿ, ಸ್ವಾವಲಂಬನೆಯನ್ನು ಪಡೆಯಲು ಸಾಧ್ಯ. ಭಾರತದಲ್ಲಿ ಇಂದು ಈ ದಿಸೆಯಲ್ಲಿ ಅನೇಕ ಕ್ರಾಂತಿಕಾರಿ ಬದಲಾವಣೆಗಳು ಕಂಡುಬರುತ್ತಿವೆ. ಹೊಸ ರೀತಿಯ ಸಮಾಜದ ರಚನೆಯಾಗಬೇಕು, ಹಳ್ಳಿಯ ಜೀವನದಲ್ಲಿ ಮಾರ್ಪಾಡನ್ನು ತರಬೇಕೆಂಬ ಇಚ್ಛೆ ಸರಕಾರ ಮತ್ತು ಜನರಲ್ಲಿ ಬಲವಾಗಿ ಬೆಳೆಯುತ್ತಿದೆ. ಇದು ನಿಜಕ್ಕೂ ಶ್ಲಾಘನೀಯ, 'ದುಡಿಯುವ ಅನೇಕ ಕೈಗಳಿರುವಾಗ ಬಂಡವಾಳದ ಬಗ್ಗೆ ಚಿಂತಿಸುವುದು ಶುದ್ಧ ಮೂರ್ಖತನ' ಎಂದು ಗಾಂಧೀಜಿ ಹೇಳಿದ್ದಾರೆ. ಇದು ಸಾಧ್ಯವಾಗಬೇಕಾದರೆ ಸಹಕಾರದಲ್ಲಿ ರೈತರ ನಂಬಿಕೆ ಭದ್ರವಾಗಬೇಕು. ಸಹಬಾಳ್ವೆಯ ಸೌಖ್ಯ ಅರಿವಾಗಬೇಕು. ರೈತರ ಅಂಧಕಾರದ ಬಾಳಿನಲ್ಲಿ ಪ್ರಗತಿಯ ಕಿರಣಗಳು ಮೂಡಬೇಕಾದರೆ ಸಹಕಾರ ತಳಹದಿಯಾಗಲೇಬೇಕು. 'ಸಹಕಾರ–ಕೃಷಿ ಅಭಿವೃದ್ಧಿಯ ಅಳತೆಗೋಲು' ಎಂಬುದನ್ನು ಯಾರು ಮರೆಯುವಂತಿಲ್ಲ.

'ಸಹಕಾರವಹುದು ಕೃಷಿಯ ಸಂಜೀವಿನಿ
ಅದರಿಂದ ಹರಿವುದು ಬೆಳೆಯ ನಿತ್ಯವಾಹಿನಿ'

—ಎಂಬ ಮಂತ್ರ ಪ್ರತಿಯೊಬ್ಬ ರೈತನಲ್ಲೂ ಮಿಡಿಯಬೇಕು. ಸಹಕಾರದಿಂದಲೇ ವಿಜಯ, ಸಹಕಾರದಿಂದಲೇ ಯಶಸ್ಸು, ಸಹಕಾರದಿಂದಲೇ ಸುಖ–ಶಾಂತಿಗಳು ಸಿಗಲು ಸಾಧ್ಯ. ಪ್ರತಿಯೊಬ್ಬ ರೈತನೂ ನಿಶ್ಚಿಂತೆಯಿಂದ ನೆಮ್ಮದಿಯಾಗಿ ಬಾಳಬೇಕು. ಪ್ರತಿಯೊಬ್ಬ ರೈತನ ಕಲ್ಯಾಣವೂ ಆಗಬೇಕು ಎನ್ನುವುದಾದರೆ, ಸಹಕಾರ ಅವರ ಜೀವನ

ಮಾರ್ಗವಾಗಬೇಕು. ಸಹಕಾರಿ ಬೇಸಾಯ ಪದ್ಧತಿಯು ಬದುಕಿನಲ್ಲಿ ಹಾಸು
ಹೊಕ್ಕಾಗಬೇಕು.

ಹೀಗೆ ನಮ್ಮ ದೇಶದಲ್ಲಿ ಭೂ ಸುಧಾರಣೆಯ ಕಾರ್ಯಕ್ರಮಗಳನ್ನು ವಿವಿಧ ರೀ
ಯಲ್ಲಿ ಜಾರಿಗೆ ತರಲಾಗುತ್ತಿದೆ. ಈ ಕಾಯಿದೆಯ ಪ್ರಕಾರ ಉಳುವವನೇ ನೆ
ದೊಡೆಯ ಕೃಷಿಗೆ ಸಂಪೂರ್ಣ ಹೊಣೆಗಾರನಾಗಿದ್ದು, ಎಲ್ಲಾ ಕಾರ್ಯಗಳ ಮೇಲ್
ಚಾರಣೆಯನ್ನು ತಾನೇ ನಡೆಸುವ ವ್ಯಕ್ತಿ ಮಾತ್ರ ಸ್ವಂತ ಉಳುಮೆದಾರ ಎನಿಸಿಕೊಳ್
ತ್ತಾನೆ. ಯಾವುದೇ ಹಳ್ಳಿಯಲ್ಲಿ ಹಂಚುವ ಜಮೀನನ್ನು ಹೊಂದಲು ಅದೇ ಹಳ್
ಯಲ್ಲಿ ವಾಸಿಸುತ್ತಿರುವ ಕೃಷಿ ಕಾರ್ಮಿಕರು ಮತ್ತು ಭೂರಹಿತ ರೈತರು ಮಾತ್
ಅರ್ಹರು. ಅಂದರೆ ಕಿಂಚಿತ್ತಾದರೂ ಜಮೀನು ಹೊಂದಿರದೆ ಇತರರ ಹೊಲಗಳಲ್
ದುಡಿಯುತ್ತಾ ಕೃಷಿಯನ್ನೇ ಜೀವನದ ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿರು
ರೈತರಿಗೆ ಭೂ ಸುಧಾರಣಾ ಶಾಸನದಿಂದ ಸರಕಾರದ ವಶಕ್ಕೆ ಬರುವ ಜಮೀನನ್ನು ವಿ
ರಣೆ ಮಾಡಲಾಗುವುದು. ಉಚ್ಛಾಟನೆ ಹೊಂದಿದ ಉಳುಮೆದಾರರಿಗೆ ಈ ಹಂಚಿ
ಯಲ್ಲಿ ಪ್ರಥಮ ಆದ್ಯತೆ ಉಂಟು. ಉಳುವವನನ್ನೇ ಒಡೆಯನನ್ನಾಗಿ ಮಾಡುವು
ರೊಂದಿಗೆ, ಜಮೀನುದಾರರು ಮತ್ತೆ ಭೂಮಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಿಲ್
ದಂತೆ ಮಾಡುವುದು. ಈ ಶಾಸನವು ರೈತರಿಗೆ ಒದಗಿಸಿರುವ ಅಮೂಲ್ಯ ರಕ್ಷಣೆ

ಭೂ ಸುಧಾರಣೆಯ ಈ ಕಾರ್ಯಕ್ರಮಗಳೆಲ್ಲವೂ ಜಯಪ್ರದವಾದಲ್ಲಿ, ಕೃಷಿ
ಕ್ಷೇತ್ರ ಅಭಿವೃದ್ಧಿಗೊಂಡು ನಮ್ಮ ರಾಷ್ಟ್ರದ ಭವಿಷ್ಯ ಸುಭದ್ರವಾಗುವುದು ನಿಸ್ಸಂದೇಹ
ಅದರಲ್ಲೂ ಕೃಷಿ ಪ್ರಧಾನವಾದ ಆರ್ಥಿಕವಾಗಿ ಹಿಂದುಳಿದ ರಾಷ್ಟ್ರಗಳಲ್ಲಿ ಭೂಸುಧಾ
ರಣೆಯ ಅಗತ್ಯ ಬಹಳವಾಗಿದೆ. ಅದಕ್ಕಾಗಿಯೇ ಪಂಚವಾರ್ಷಿಕ ಯೋಜನೆಗಳಲ್
ಭೂ ಸುಧಾರಣೆಯ ಕ್ರಮಗಳಿಗೆ ಅತ್ಯಂತ ಹೆಚ್ಚಿನ ಮಹತ್ವ ನೀಡಲಾಗಿದೆ. ಜಮೀನ
ಹಿಡುವಳಿ ಪದ್ಧತಿಯಲ್ಲಿ ಸೂಕ್ತ ಬದಲಾವಣೆಗಳನ್ನು ಕೈಗೊಳ್ಳಲಾಗುತ್ತಿದೆ. ಇದ
ರೊಂದಿಗೆ ಕೃಷಿ ಉತ್ಪತ್ತಿಯನ್ನು ಹೆಚ್ಚಿಸಲು ನೀರಾವರಿಯ ಸೌಲಭ್ಯಗಳು, ಉತ್ಕೃಷ್ಟ
ಬೀಜಗಳು, ರಾಸಾಯನಿಕ ಗೊಬ್ಬರಗಳು, ಜಲಾಶಯಗಳ ನಿರ್ಮಾಣ, ಆಧುನಿ
ಯಂತ್ರೋಪಕರಣಗಳು ಇತ್ಯಾದಿಗಳಿಗೂ ಸಾಕಷ್ಟು ಗಮನ ಹರಿಸಲಾಗಿದೆ. ಏಕೆಂದರೆ
ಈ ಅಂಶಗಳ ನೆರವಿಲ್ಲದೆ ಬರಿಯ ಭೂ ಸುಧಾರಣೆಯಿಂದ ಕೃಷಿ ಅಭಿವೃದ್ಧಿ ಸಾಧ್ಯವಿಲ್ಲ
ಆದರೆ ಸರಕಾರ ಇಷ್ಟೆಲ್ಲಾ ವ್ಯವಸ್ಥೆಗಳನ್ನು ಕೈಗೊಂಡಿದ್ದರೂ, ಭೂ ಸುಧಾರಣೆಯ
ಕ್ರಮಗಳು ವಾಸ್ತವಿಕವಾಗಿ ಪರಿಣಾಮಕಾರಿಯಾಗಬೇಕಾದರೆ ರೈತರೂ ಮುಂದೆ ಬಂದು
ಸಹಕರಿಸಬೇಕು. ಜೊತೆಗೆ ಭೂ ಸುಧಾರಣಾ ಸಂದೇಶವನ್ನು ರಾಷ್ಟ್ರದ ಮೂಲೆ
ಮೂಲೆಗೂ ತಲುಪಿಸುವಲ್ಲಿ ರೈತರ ಸಹಕಾರಿ ಸಂಸ್ಥೆಗಳು ಮಹತ್ವದ ಪಾತ್ರ ವಹಿಸ
ಬೇಕು. ಆಗಲೇ ಭೂ ಸುಧಾರಣಾ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿ
ರಾಷ್ಟ್ರ ಯಶಸ್ಸಿನ ಹಾದಿಯತ್ತ ಮುನ್ನುಗ್ಗಲು ಸಾಧ್ಯ.

# ಲವಂಗ : ಗಾತ್ರದಲ್ಲಿ ಕಿರಿದು, ಗುಣದಲ್ಲಿ ಹಿರಿದು

—ಪ. ರಾಮಕೃಷ್ಣ ಶಾಸ್ತ್ರಿ,
"ಶಿವಶಕ್ತಿ ನಿಲಯ" ಅಂಚೆ: ಮುಜ್ಜಿನ-574295 (ದ ಕ.)

ಘಮಘಮಿಸುವ ಲವಂಗ ಗಾತ್ರದಲ್ಲಿ ಒಂದು ಅಂಗುಲಕ್ಕಿಂತ ಕಿರಿದು. ಆದರೆ ಭಾರತದಲ್ಲಿ ಅನಾದಿಕಾಲದಿಂದಲೂ ಸಿಹಿ ತಿಂಡಿಗಳಿಗೆ, ಸಂಬಾರ ಪದಾರ್ಥಗಳಿಗೆ ಉಪಯೋಗದಲ್ಲಿರುವ ಅದರ ಹಿರಿಯ ಔಷಧೀಯ ಗುಣಗಳ ಬಗೆಗೆ ಕ್ರಿ ಪೂ. ನಾಲ್ಕನೆಯ ಶತಮಾನದಲ್ಲಿ ಧನ್ವಂತರಿಯು ಬರೆದ ವೈದ್ಯಕೋಶದಲ್ಲೂ ಕ್ರಿ. ಪೂ. ಇನ್ನೂರರಲ್ಲಿ ಚರಕ ರಚಿಸಿದ ವೈದ್ಯಗ್ರಂಥದಲ್ಲೂ ಉಲ್ಲೇಖಗಳಿವೆ. ಬಂಗಾಳಕೊಲ್ಲಿಯ ಪೂರ್ವಭಾಗ ಅದರ ವ್ಯವಸಾಯಕ್ಕೆ ಪ್ರಸಿದ್ಧವಾಗಿತ್ತೆಂದು ರಾಮಾಯಣ ಮತ್ತು ರಘುವಂಶದಲ್ಲಿ ಹೇಳಲಾಗಿದೆ. ಭಾರತಕ್ಕೆ ಲವಂಗದ ಗಿಡಗಳನ್ನು 1497 ರಲ್ಲಿ ವಾಸ್ಕೋಡಗಾಮ ತಂದ ಎನ್ನುತ್ತದೆ ಇತಿಹಾಸ. ಕ್ರಿ. ಪೂ 220–206 ರ ಚೀನೀ ಗ್ರಂಥಗಳಲ್ಲಿ ನ್ಯಾಯಾಂಗದ ಅಧಿಕಾರಿಗಳು ಸಾಮ್ರಾಟನೊಂದಿಗೆ ಸಂಭಾಷಿಸುವಾಗ ಬಾಯಿಯ ದುರ್ಗಂಧ ಬರದಂತೆ ಥೇಂಗ್ಲಿ (ಲವಂಗ) ತಿನ್ನುತ್ತಿದ್ದರೆಂದು ಹೇಳಿದೆ. 13 ಬಗೆಯ ವಸ್ತುಗಳಿರುವ 'ತಾಂಬೂಲ" ದಲ್ಲಿ ಲವಂಗವೂ ಒಂದು.

ಪ್ರೇಮಸಂಬಂಧವನ್ನು ದೃಢಗೊಳಿಸಲು ಲವಂಗ ಪ್ರಾಮುಖ್ಯ ಎನ್ನುವ ಇರಾನಿಗಳ ಮದುವೆಗೆ ಅದು ಮುಖ್ಯ. ಹಲ್ಲುನೋವು ಮತ್ತಿತರ ನಾನಾ ವ್ಯಾಧಿಗಳಿಗೆ ಲವಂಗ ಪುರಾತನದಿಂದಲೇ ರಾಮಬಾಣ. ಅದರಲ್ಲಿ ಶೇ. 13 ಟ್ಯಾನಿನ್, ಶೇ 10 ನಾರು ಶೇ. 16 ನೀರು, ಶೇ 16-20 ಭಾಗ ತೈಲವಿದೆ 'ಮಿರ್ಟೇಸಿ' ಸಸ್ಯವರ್ಗಕ್ಕೆ ಸೇರಿದ 'ಯೂಜಿನಿಯೋ ಕ್ಯಾರಿಯೋ ಫಿಲ್ಲಾಟ' ಎಂಬ ಮರದಲ್ಲಿ ಒಣಗಿದ ಹೂವಿನ ಮೊಗ್ಗು ಲವಂಗ. ಮೊಗ್ಗಿನಲ್ಲಿ ತೈಲಾಂಶ ಅಧಿಕ ಹೂವಾಗಿ ಅರಳಿದರೆ ಶೇ. 5 ರಿಂದ 6.5 ರಷ್ಟು ಮಾತ್ರ ತೈಲ ಮತ್ತು ಪಿಷ್ಟಗಳಿವೆ ಆರಂಭದಲ್ಲಿ ಬಂಗಾರ ವರ್ಣದ್ದಾಗಿ ಅನಂತರ ಕಂದು ಬಣ್ಣಕ್ಕೆ ತಿರುಗುವ ತೈಲದಲ್ಲಿ ಫಿನಾಲಿಕ್ ಅಂಶವಿರುವುದರಿಂದ ಗಾಯಗಳನ್ನು ತೊಳೆಯಲು ಅದು ಅತ್ಯುಪಯುಕ್ತ.

ಲವಂಗಕ್ಕೆ ಘಮ ಘಮ ವಾಸನೆ ತಂದಿರುವುದು ಪ್ರಮುಖ ಸುಗಂಧ ದ್ರವ್ಯವೆನಿಸಿದ ಯೂಜಿನಾಲ್ ಅಂಶ ಇದನ್ನು ಪ್ರತ್ಯೇಕಿಸಿ ಕೃತಕ ವಾನಿಲ್ಲಾ ತಯಾರಿಸುತ್ತಾರೆ. ಅಂಬರ್‌ಗ್ರೀಸ್, ಲ್ಯಾವೆಂಡರ್ ಮಸ್ ಮುಂತಾದ ಸುಗಂಧ ದ್ರವ್ಯಗಳು, ಚಾಕೊಲೇಟ್, ಐಸ್‌ಕ್ರೀಮುಗಳನ್ನು ಸಾಬೂನು, ಟೂತುಪೇಸ್ಟುಗಳನ್ನೂ ಅದರಿಂದ

ತಯಾರಿಸುತ್ತಾರೆ ಪ್ರಾಚೀನ ಯುರೋಪಿನಲ್ಲಿ ಕಿತ್ತಳೆ ಹಣ್ಣಿನ ರಸಕ್ಕೆ ಲವಂಗದ ಚೂರ್ಣ ಬೆರಸಿ, ಬಟ್ಟೆಬರೆಗಳಿಗೆ ಸುವಾಸಿತ ಮತ್ತು ಕ್ರಿಮಿನಾಶಕವಾಗಿ ಬಳಸುತ್ತಿದ್ದರು. ವಾತಹರ ಶಕ್ತಿಯಿರುವ ಲವಂಗ ವಾಯುರೋಗ, ಕೆಮ್ಮು; ಅಜೀರ್ಣ, ಒಸಡುಗಳ ಬಾವು, ಉಬ್ಬಸ ಮೊದಲಾದ ರೋಗಗಳಿಗೂ ಸಂಜೀವಿನಿ 18 ನೆಯ ಶತಮಾನದಲ್ಲಿ ಫ್ರೆಂಚರು ಲವಂಗದೆಣ್ಣೆಗೆ ಏಲಕ್ಕಿ, ಕರ್ಪೂರ ಮತ್ತು ಬೆಳ್ಳುಳ್ಳಿ ಸೇರಿಸಿ ಪ್ಲೇಗ್ ರೋಗವನ್ನು ಗುಣಪಡಿಸುತ್ತಿದ್ದರು. ಲವಂಗ ರುಚಿಯಲ್ಲಿ ಖಾರವಾದರೂ ಹಿತಕರ ಮಸಾಲೆ

ಉತ್ತೇಜಕತ ಸುಗಂಧವುಳ್ಳ ಲವಂಗದಲ್ಲಿ ಕ್ಯಾರ್ಬಿಟಾನಿಕ್ ಆಮ್ಲ ಸಿಗುತ್ತವೆ. ಲವಂಗದಿಂದ ತಯಾರಿಸಿದ ಸಿಗರೇಟುಗಳು ಜಾವಾದಲ್ಲಿ ಜನಪ್ರಿಯ ನಂಜನಿರೋಧಕ ಗುಣವಿರುವ ಲವಂಗದೆಣ್ಣೆ ಇತರ ತೈಲಗಳ ರಕ್ಷಣೆಗೆ ಸಹಕಾರಿ. ಸೂಕ್ಷ್ಮದರ್ಶಕ ಯಂತ್ರದ ಸ್ಲೈಡ್‌ಗಳ ತಯಾರಿಕೆ, ವೈಜ್ಞಾನಿಕ ಉಪಕರಣಗಳ ಶುದ್ಧೀಕರಣ, ಕೃತಕ ಚರ್ಮ ತಯಾರಿಕೆ ಇದಕೆಲ್ಲ ಲವಂಗ ಅತ್ಯಗತ್ಯ. ಅಂತಾರಾಷ್ಟ್ರೀಯ ಸಂಬಾರ ಪದಾರ್ಥಗಳಲ್ಲಿ ಕರಿಮೆಣಸಿನ ಅನಂತರದ ಸ್ಥಾನ ಲವಂಗಕ್ಕೆ. ಇದರ ಆಮದಿಗೆ ಭಾರತದಲ್ಲಿ ನಿಷೇಧವಿರುವುದರಿಂದ ಇಲ್ಲಿಗೆ ಕಳ್ಳಸಾಗಾಣಿಕೆಯಾಗುವ ವಸ್ತುಗಳಲ್ಲಿ ಲವಂಗವೂ ಸೇರಿದೆ. ಜಾಗತಿಕ ಲವಂಗದ ಶೇ. 60 ಭಾಗ ಜಾಂಜಿಬಾರ್‌ನಲ್ಲಿ ಉತ್ಪನ್ನವಾಗುತ್ತದೆ.

ಲವಂಗದ ತವರು ವೆಸ್ಟ್ ಇಂಡೀಸಿನ ಮೊಲ್ಕೆಸ್ ದ್ವೀಪ. ಅಲ್ಲಿ ಪ್ರತಿಯೊಂದು ಮಗು ಜನಿಸಿದಾಗ ಒಂದು ಲವಂಗದ ಗಿಡ ನೆಡುವುದು ವಾಡಿಕೆ ಆಫ್ರಿಕಾ ಖಂಡದ ನಡು ಗಡ್ಡೆಗಳಲ್ಲಿ ಲವಂಗದ ಕಾಡುಗಳಿದ್ದವು ಚೀನೀ ಪ್ರವಾಸಿಗರು ಅದನ್ನು ತಮ್ಮ ದೇಶಕ್ಕೊಯ್ದು ಮಸಾಲೆಯಾಗಿ ಬಳಸುತ್ತಿದ್ದರು. ಎರಡನೆಯ ಶತಮಾನದ ಹೊತ್ತಿಗೆ ಲವಂಗ ಯುರೋಪ್ ಖಂಡವನ್ನು ಪ್ರವೇಶಿಸಿ ಅಲ್ಲಿನ ಧಾರ್ಮಿಕ ಕಾರ್ಯಗಳಲ್ಲಿ ಮಹತ್ವಪೂರಿತ ಸ್ಥಾನ ಪಡೆಯಿತು. ಇಸ್ಲಾಂ ಧರ್ಮ ಪ್ರಸಾರಕರು ಹೋದೆಡೆಯಲ್ಲೆಲ್ಲ ಲವಂಗದ ಪರಿಚಯವೂ ಬೆಳೆಯಿತು. ಪೋರ್ಚುಗೀಸರ ವ್ಯಾಪಾರಿ ವಸಾಹತುಗಳು ವಿಶ್ವದಾದ್ಯಂತ ಸ್ಥಾಪಿತವಾಗುವುದರೊಂದಿಗೆ ಅವರ ರಾಜಧಾನಿ ಲಿಸ್ಬನ್ ಲವಂಗ ವಹಿವಾಟಿನ ಒಂದು ಕೇಂದ್ರವಾಯಿತು.

1579 ರಲ್ಲಿ ಆಂಗ್ಲರು ಯುದ್ಧ ಮುಖೇನ ಲವಂಗ ಬೆಳೆಯುವ ದ್ವೀಪಗಳನ್ನು ವಶಪಡಿಸಿಕೊಂಡರೂ ಡಚ್ಚರು ಅವರ ಅಧಿಪತ್ಯವನ್ನು ಕಿತ್ತುಕೊಂಡರು ಬಹುಕಾಲ ಲವಂಗ ದ್ವೀಪಗಳ ಅಧಿಕಾರಿಗಳಾಗಿದ್ದ ಡಚ್ಚರು ಅಂಬೋನಿಯಾ ದ್ವೀಪದಲ್ಲಿ ಮಾತ್ರವೇ ಅದನ್ನು ಬೆಳೆಯಬೇಕೆಂದು ಕಟ್ಟು ಮಾಡಿದ್ದರು. 18 ನೆ

ಉಷ್ಣ ಪ್ರದೇಶದ ಬೆಳೆಯಾಗಿರುವ ಲವಂಗ ಜಾಂಜಿಬಾರಿನ ಹೊರತು ಸಿಟೆಲಸ್, ಮಡಗಾಸ್ಕರ್, ಮಸ್ಕರೀನ್ ದ್ವೀಪಗಳಲ್ಲಿ ಹೆಚ್ಚಾಗಿಯೂ ಮೊಲುಸ್‌ಕಸ್ ದ್ವೀಪ ಸಮುದಾಯದಲ್ಲಿ ಅಲ್ಪವಾಗಿಯೂ ಬೆಳೆಯುತ್ತವೆ. ಜಗತ್ತಿನಲ್ಲೇ ಶ್ರೇಷ್ಠ ದರ್ಜೆಯ ಲವಂಗ ಮಲಯಾದ ಪಿನಾಂಗ್ ಪ್ರಾಂತ್ಯದಲ್ಲಿ ಸಿಗುವುದು. ಸಿಂಹಳದ ಕ್ಯಾಂಡಿ, ಇಂಡೋನೇಷ್ಯಾ, ಭಾರತದಲ್ಲಿ ತಮಿಳ್ನಾಡಿನ ಕನ್ಯಾಕುಮಾರಿ, ತೆಂಕಾಸಿ ಗುಡ್ಡಗಳು ನೀಲಗಿರಿ; ಉದಕಮಂಡಲದ ಬಳಿಯ ಬರ್ಲಿಯಾರ್, ಕೇರಳದ ಕೊಟ್ಟಾಯಂ, ಕ್ವಿಲಾನ್ ಮತ್ತು ಕರ್ನಾಟಕದಲ್ಲಿ ಪ್ರಾಯೋಗಿಕವಾಗಿ ಕೇವಲ 250 ಹೆಕ್ಟೇರ್ ವಿಸ್ತಾರ ದಲ್ಲಿ ಅದರ ಕೃಷಿಯಿದೆ. ರೊಕ್ಕದ ಬೆಳೆಯಾದ ಲವಂಗದ ವ್ಯವಸಾಯ ಸಾಗಿ ಬಂದ ಈ ಒಂದೂವರೆ ಶತಮಾನದಲ್ಲೂ ಭಾರತದಲ್ಲಿ ಅದರ ಕೃಷಿ ಏನೇನೂ ಪ್ರಗತಿ ಸಾಧಿಸಿಲ್ಲ. ಲವಂಗ ಬಳಕೆಯಲ್ಲಿ ನೆದರ್ಲ್ಯಾಂಡಿನ ಅನಂತರದ ಗಣ್ಯಸ್ಥಾನ ಭಾರತದ್ದೇ ಆಗಿದೆ.

ನಿತ್ಯ ಹರಿದ್ವರ್ಣವಿರುವ ಲವಂಗದ ಗಿಡ ಸಮುದ್ರಮಟ್ಟದಿಂದ 900 ಅಡಿ ಎತ್ತರದವರೆಗೆ ಬೆಳೆಯುತ್ತವೆ. ಕೆಂಪು ಮರಳು ಮಿಶ್ರಿತವಾದ ಮಣ್ಣು ಅಥವಾ ಜೇಡಿ ಮಣ್ಣು ಅದಕ್ಕೆ ಇಷ್ಟ. ಅದರ ಗಿಡಕ್ಕೆ ತುಂಬ ನೆರಳು ಬೇಕಾಗಿರುವುದರಿಂದ ಬಾಳೆ ಕಾಫಿ ಇತ್ಯಾದಿಗಳ ತೋಟಗಳೊಳಗೆ ಬೆಳೆಸುವುದು ಹೆಚ್ಚು. ಲವಂಗದ ಹಣ್ಣಿನಿಂದ ತಯಾರಿಸಿದ ಗಿಡಗಳನ್ನು ನೆಡುವರಲ್ಲದೆ ಕಸಿ ಕಟ್ಟುವ ವಿಧಾನವೂ ಬಳಕೆಯಲ್ಲಿದೆ. ತುಂಬ ಸೂಕ್ಷ್ಮವೂ ನವಿರೂ ಆದ ಗಿಡ ಬೆಳೆಯುವುದು ಬಹು ನಿಧಾನ. ಅದರ ಬೆಳೆಗೆ ರಾಸಾಯನಿಕ ಗೊಬ್ಬರಗಳನ್ನು ಬಳಸುವ ವಿಧಾನ ಈಗೀಗಲಾರಂಭವಾಗಿದ್ದರೂ ಕೇಂಗಾ ಹಿಂಡಿ ಫಲಕಾರಿ

ಏಕ ಕೋನಾಕೃತಿಯಲ್ಲಿರುವ ಲವಂಗದ ಗಿಡ 40 ಅಡಿ ಎತ್ತರದವರೆಗೆ ಬೆಳೆಯುತ್ತದೆ. ಸಸಿಗಳು 9–10 ವರ್ಷ ವಯಸ್ಸಾದಾಗ ಹೂವು ಬಿಡುತ್ತವೆ. ಅದುವರೆಗೂ ಆಗಾಗ ಕೊಂಬೆ ಕತ್ತರಿಸುತ್ತಿದ್ದು ಅನಂತರ ಈ ಕ್ರಮವನ್ನು ಕೈ ಬಿಡಬೇಕು. ಗಿಡಕ್ಕೆ ಇಪ್ಪತ್ತು ವರ್ಷ ದಾಟಿದ ಮೇಲೆ ಅಧಿಕ ಇಳುವರಿ ಸಿಗುವುದು. ಜುಲೈನಿಂದ ಅಕ್ಟೋಬರ್ ವರೆಗಿನ ಮೊದಲ ಕೊಯ್ಲಿಗೆ ಮ್ಸಾರ್ಕಾ ಮತ್ತು ನವಂಬರದಿಂದ ಜನವರಿ ವರೆಗಿನ ಎರಡನೆಯ ಕೊಯ್ಲಿಗೆ ಮೂಳೆ ಎನ್ನುತ್ತಾರೆ. ಅನೇಕ ದೇಶಗಳಲ್ಲಿ ಒಂದು ಸೆಂಟಿ ಮೀಟರುಗಿಂತ ಎಷ್ಟೋ ಚಿಕ್ಕದಿರುವ ಲವಂಗವೂ ಇದೆ. ಅರಳದೆ, ಮೊಗ್ಗಾಗಿರುವಾಗಲೇ ಕಿತ್ತು ಒಣಗಿಸಿದರೆ ಅದು ಲವಂಗ. ಅರಳಿದರೆ ಫಲವಿಲ್ಲ.

ಕಾಲಮಾನ, ತಳಿಗುಣ, ಮರದ ಬೆಳವಣಿಗೆಗೆ ತಕ್ಕ ಹಾಗೆ ಒಂದು ಮರದಿಂದ ಒಂದೂವರೆ ಕೆ. ಜಿ. ಯಿಂದ ಒಂಬತ್ತೂವರೆ ಕೆ. ಜಿ. ಯಷ್ಟು ಒಣ ಮೊಗ್ಗು ಸಿಗುತ್ತದೆ ಕೆ. ಜಿ. ಗೆ ಸಾವಿರಾರು ರೂಪಾಯಿ ಬೆಲೆಯಿದೆ. ಮೊಗ್ಗಿನ ಅವಸ್ಥೆಯಲ್ಲೇ

ಉಳಿಯುವ ಹೂವು ಗಂಡೆಂದೂ ಅರಳಿದರೆ ಹೆಣ್ಣೆಂದೂ ಕರೆಯುತ್ತಾರೆ. ಹೆಣ್ಣ
ತೈಲಾಂಶ ಕಮ್ಮಿ. ಗಂಡಿಗೆ ಖಾರ ಹೆಚ್ಚು. ಮೊಗ್ಗಿನ ತಳಭಾಗ ಕೆಂಪಾದಾ
ಕೊಯ್ಲಿಗೆ ಸಿದ್ಧವೆಂದರ್ಥ.

ಕೊಯಿದ ಮೊಗ್ಗುಗಳನ್ನು ಸಿಮೆಂಟ್ ನೆಲದಲ್ಲಿ ಗುಂಪಾಗಿ ಒಣಗಿಸಿ ಭಕ್ತ
ಹಾಕುತ್ತಾರೆ. ಹಸಿರಾದ ಮೊಗ್ಗು ಕಂದು ವರ್ಣಕ್ಕೆ ತಿರುಗಿದಾಗ ಕಸ ಕಡ್ಡಿಗಳನ
ಬೇರ್ಪಡಿಸಿ ಮಾರಾಟಕ್ಕೆ ಕಳಿಸುತ್ತಾರೆ. ಒಣಗಿಸುವಾಗ ಬಿಸಿಲು ಸಾಕಾಗ
ಬಿಳಿವರ್ಣ ತಾಳಿದ ಲವಂಗಕ್ಕೆ ಖೋಕರ್ ಎಂದು ಹೆಸರು. ಇದಕ್ಕೆ ಬೆಲೆ ಕಮ್ಮಿ

---

## ಸಂಸಾರ ಹ್ಯೇಯ

ಎನಗೇಕಯ್ಯ ಸಾವ ಪ್ರಪಂಚಿನ ಪುತ್ಥಳಿ ? ಮಾಯಿಕದ ಮಲಭಾಂಡ ಆಕ
ರದ ಭವನಿಳಯ ಎನಗೇಕಯ್ಯ ? ಬೆರಳು ಕಾಳಹಣ್ಣ ಹಿಸುಕಿದಡೆ, ಮೇಲಲುಂಟೆ
ಎನ್ನ ತಪ್ಪ ಒಪ್ಪುಗೊಳ್ಳಾ ಚನ್ನಮಲ್ಲಿಕಾರ್ಜುನದೇವಾ.

ಅಯ್ಯಾ, ಸರ್ವಮೂಲಾಹಂಕಾರವಿಡಿದು, ಕುಲಭ್ರಮೆ, ಛಲಭ್ರಮೆ, ಜಾ
ಭ್ರಮೆ, ನಾಮವರ್ಣ ಆಶ್ರಮ ಮತ ಶಾಸ್ತ್ರಭ್ರಮೆ ರಾಜ್ಯಭ್ರಮೆ, ಧನಭ್ರಮೆ ಪುತ್ರ
ಮಿತ್ರ ಐಶ್ವರ್ಯ ತ್ಯಾಗ ಯೋಗಭ್ರಮೆ ಕಾಯ ಕರಣ ವಿಷಯಭ್ರಮೆ ವಾಯುಮ
ಭಾವ ಜೀವ ಮೋಹ ಭ್ರಮೆ, ಸಾಹಂ ಕೋಹಂ ಭ್ರಮೆ, ಶಿವೋಹಂ ಭ್ರಮೆ
ಮಾಯಾ ಭ್ರಮೆ ಮೊದಲಾದ ಮೂವತ್ತೆರಡು ಪಾಶಾ ಭ್ರಮಿತರಾಗಿ ತೋಲು
ವೇಷಧಾರಿಗಳ ಕಂಡು, ಶಿವಭಕ್ತಿ ಶಿವಭಕ್ತ ಶಿವಪ್ರಸಾದಿ ಶಿವಶರಣ ಶಿವೈಕ್ಯ ಶಿವಜ
ಗಮವೆಂದು ನುಡಿಯಲಾರದೆ ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತ್ತಯ
ಚನ್ನಮಲ್ಲಿಕಾರ್ಜುನ.

## ಲಿಂಗಧಾರಣ

ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು
ತೋರಿದನೆನಗೆ ಗುರು ಅಂಗವಿಕಾರದ ಸಂಗವ ನಿಲಿಸಿ ಲಿಂಗವನಂಗದಮೇಲೆ ಸ್ಥಾಪ್ಯವ
ಮಾಡಿದನೆನ್ನ ಗುರು. ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದನೆನ್ನ
ತಂದೆ ಚನ್ನಮಲ್ಲಿಕಾರ್ಜುನನ ನಿಜವನರುಹಿದೆನ್ನನ್ನ ಗುರು.

—ಅಕ್ಕ ಮಹಾದೇವಿ

(1986 ಜೂನ್ ತಿಂಗಳಿನಿಂದ ಮುಂದುವರಿದ ಲೇಖನ)

# ತಳಿರು-ತೋರಣ

ಧಾರವಾಹಿ-10

(ಸಾಮಾಜಿಕ ಕಿರು ಕಾದಂಬರಿ)

—ಎನ್. ಎಸ್. ಗದಗಕರ, ಶುಕ್ರವಾರ ಪೇಟೆ, ನವಲೂರು ಅಗಸೆ, ಧಾರವಾಡ.

ಪ್ರವಾಸವು ಮುಂದುವರಿಯಿತು. ಆದರೆ ವಿಕ್ರಮಪುರ ಇನ್ನೂ ನಾಲ್ಕು ಮೈಲಿ ಉಳಿದಾಗಲೆ ಕೋಲಾಹಲ ಎದ್ದಿತು. ತಿಲೋತ್ತಮೆ ಜಗಳ ತೆಗೆದಳು—"ನನಗೆ ಈ ಮಗು ಬೇಡ. ಜೀವವೂ ಬೇಸರಾಗಿದೆ. ಕೆಳಗೆ ಹಾರುತ್ತೇನೆ ಮೋಟಾರಿನಿಂದ. ಮರಳಿ ಭದ್ರಗಿರಿಗೆ ಹೋಗುವೆ" ಎಂದು ಬಡಬಡಿಸಹತ್ತಿದಳು. "ಕಾರನ್ನು ನಿಲ್ಲಿಸದಿದ್ದರೆ ಈ ತಿರುಗಣೆಯ ತಂಬಿಗೆಯಿಂದ ಅದರ ಗಾಜು ಒಡೆದುಹಾಕುವೆ" ಎಂದಳು. ಆದರೆ ಏಕೊ ಸುದೈವದಿಂದ ಆಕೆ ಜೀವ ಬೇಜಾರವಾದವರಂತೆ ಕೆಳಗೆ ಹಾರಲಿಲ್ಲ. ಮಗು ವಿಶುಕುಮಾರನನ್ನು ಹೊರಗೆ ಬಿಸಾಕಲಿಲ್ಲ. ಬಾಡಿಗೆಯ ಕಾರಿನ ಗಾಜನ್ನು ತಂಬಿಗೆಯಿಂದ ಒಡೆಯಲಿಲ್ಲ. ಸುಸೂತ್ರವಾಗಿ ನಾಲ್ವರೂ ವಿಕ್ರಮಪುರಕ್ಕೆ ಮುಟ್ಟಿದರು. ಅಳಿಯಂದಿರು ಬಹಳ ದಿನಗಳ ನಂತರ ಬಂದರೆಂದು ಅತ್ತೆ ಮಾವಂದಿರು ಒಳ್ಳೆ ಆದರಾತಿಥ್ಯ ಸಲ್ಲಿಸಿದರು. ಶಿರಾ, ಅವಲಕ್ಕಿ, ಬಾಳೆಹಣ್ಣು, ಚಹದ ವ್ಯವಸ್ಥಿತ ಏರ್ಪಾಡು ನಡೆಯಿತು. ಕ್ರಮೇಣ ವಿಶ್ವನಾಥನು ತಾನು ಬಂದ ಕಾರಣ ನಿವೇದಿಸಿದನು—ತಾಯಿ ಗೋದೂಬಾಯಿ ತಿಲೋತ್ತಮೆಯನ್ನು ಮನೆಯಲ್ಲಿಟ್ಟುಕೊಳ್ಳಲು ಒಪ್ಪಿದರು. ಆಕೆಯದು ಎಷ್ಟಾದರೂ ಹೆಣ್ಣರುಳು. ಈಗಂತೂ ಚಿತ್ತ ವಿಭ್ರಮೆಯ ಸಂಸ್ಥಿತಿ. ಆದರೆ ತಂದೆ ಶಂಭೂರಾಯರು ಮಾತ್ರ ಖಡಾಖಂಡಿತವಾಗಿ ತಮ್ಮ ತೀರ್ಪು ಹೇಳಿದರು ವ್ಯಾವಹಾರಿಕವಾಗಿ—"ಈಗಂತೂ ನಮ್ಮ ಮನೆಯಲ್ಲಿ ಲಗ್ನದ ವಾತಾವರಣ ತಿಲೋತ್ತಮೆ ಭ್ರಮಿಷ್ಟೆ ಎನ್ನುವಿರಿ. ನಿಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಉಪಚಾರ ಮಾಡಿಸಿರಿ. ಆ ಹೊಣೆ ನಿಮ್ಮದು. ನೆಟ್ಟಗಾದ ಮೇಲೆ ಬೇಕಾದರೆ ತಿಂಗಳು ಇರಲಿ. ನಾವು ಬೇಡವೆನ್ನುವದಿಲ್ಲ" ವಿಶ್ವನಾಥ, ಶ್ರೀಕಾಂತರಿಗೆ ಈ ಮಾತು ಸರಿ ಕಂಡಿತು. ತಮ್ಮ ತೊಂದರೆಯನ್ನು ಅನ್ಯರ ಮೇಲೆ ಹೇರುವುದು ಸರಿಕಾಣಲಿಲ್ಲ. "ಕೊಟ್ಟ ಹೆಣ್ಣು ಕುಲಕ್ಕೆ ಹೋಯಿತು" ಎಂಬ ಉಕ್ತಿ ಸತ್ಯವೇ ಎಂದು ವಿಚಾರಿಸಿ ಮತ್ತೆ ಬಂದ ಹಾದಿಗೆ ಸುಂಕವಿಲ್ಲೆಂಬಂತೆ ಮರಳಿದರು ಭದ್ರಗಿರಿಗೆ. ಒಂದೇ ದಿನದಲ್ಲಿ 20-50 ರೂಪಾಯಿ ವೆಚ್ಚವಾಯಿತು. ಆಗಲಿ, ತಾವು ದೈವಗೇಡಿಗಳೆಂದು ಅವರು ಸುಮ್ಮನಾದರು. ಮುಂದೇನು? ಎಂಬ ಪ್ರಶ್ನೆ ಧುತ್ತೆಂದು ಮನೆಯ ಜನರೆದುರಿಗೆಲ್ಲ ನಿಂತಿತು.

ದಿವಸಗಳು ಜುಲ್ಮೆಯಿಂದ ಕಳೆದವು. ತಿಲೋತ್ತಮೆಗೆ ಗುಣಮುಖವಾಗ ಲಿಲ್ಲ. ಹಗಲು ಹನ್ನೆರಡು ತಾಸು ಆಕೆ ಹುಚ್ಚಿಯಂತೆಯೇ ವರ್ತಿಸಹತ್ತಿದಳು. ಹಿಂದೆ ಸೂಚನೆ ಇತ್ತ ಹಿರಿಯರ ಮಾತಿನಂತೆ ಕೊನೆಗೊಮ್ಮೆ ಮಾನಸಿಕ ರೋಗಿಗಳ ಚಿಕಿತ್ಸಾ ಲಯಕ್ಕೆ ಆಕೆಯನ್ನು ಸೇರಿಸುವುದೆಂದು ನಿರ್ಣಯವಾಯಿತು. ಇಂದು ಅದು ಅಪಾರ ದುಃಖದ ಕೆಲಸವೆನಿಸಿದರೂ ನಾಳೆ ಆಕೆಯ ಜೀವನ ಸುಖಕರವಾಗಿ ಪರಿಣಮಿಸಿತೆಂದು ಮೋಹನರಾಯರು ಹಾರೈಸಿದರು. ಆದರೆ ರೋಗಿಯನ್ನು ಆಸ್ಪತ್ರೆಗೆ ಸೇರಿಸುವದು ಸಣ್ಣ ಮಾತಾಗಿರಲಿಲ್ಲ. ಪೋಲೀಸ ಸಬ್ ಇನ್ಸಪೆಕ್ಟರರ ಹೇಳಿಕೆಯ ಪ್ರಕಾರ ನೆರೆ ಹೊರೆಯವರಿಂದ ಹಲವಾರು ಖೊಟ್ಟಿ ಅರ್ಜಿಗಳನ್ನು ತೆಗೆದುಕೊಳ್ಳಲಾಯಿತು. ಒಟ್ಟು ನಮಗೆ ಈಕೆಯಿಂದ ನೆರೆಹೊರೆಯಲ್ಲಿ ಸುರಕ್ಷತೆಯಿಲ್ಲ; ನಮಗೆ ಬಯ್ಯುತ್ತಾಳೆ, ವಿಪ ರೀತ ಗದ್ದಲ ಹಾಕುತ್ತಾಳೆ, ಆಗೀಗ ಹೊಡೆಯುತ್ತಾಳೆ–ಎಂದು ಪ್ರಕರಣಗಳು ಸಿದ್ಧ ವಾದವು. ಆ ಪ್ರಕಾರ ಆಸ್ಪತ್ರೆಗೆ ಸೇರಿಸಲು ಅರ್ಹತೆ ದೊರಕಿದಂತಾಯಿತು.

ಆಸ್ಪತ್ರೆಗೆ ಕಳಿಸುವ ದಿನ ಬಲು ಹೃದಯವಿದಾರಕ ಎನಿಸಿತು. ಅಂದು ಇಡಿ ದಿನ ಜಿಟಿ ಜಿಟಿ ಮಳೆ, ಮರುದಿನವೇ ಗೋಕುಲಾಷ್ಟಮಿ. ತುಂಬಿದ ಮನೆಯಾನ್ನು ಕೂಸಿನಿಂದ ಬಿಡಿಸಿ ಆಕೆಯನ್ನು ಕಾರಿನಲ್ಲಿ ಹೊರಡಿಸುವದು ಬಲು ದುಸ್ತರವಾಯಿತು. ಒಂದು ಒಳ್ಳೆ ಕೆಲಸ ಮಾಡಲು ಹತ್ತು ಸುಳ್ಳೊಂದು ಸೊಟ್ಟೊಂದು ಹೇಳುವದು ಅವಶ್ಯ ವಿದೆ ಎನ್ನುತ್ತಾರೆ. ಹಾಗೆ "ನಿಮ್ಮ ಅಕ್ಕನ ಮನೆಯಲ್ಲಿ ಸತ್ಯನಾರಾಯಣ ವ್ರತವಿದೆ. ಊಟ, ಪ್ರಸಾದಕ್ಕೆ ಬಾ ಎಂದಿದ್ದಾರೆ" ಎಂದು ವಿಶ್ವನಾಥನ ಕಡೆಯಿಂದ ತಿಲೋತ್ತ ಮೆಯ ಕಿವಿಯಲ್ಲಿ ಹೇಳಿಸಲಾಯಿತು. ಆಕೆಗೆ ಅರ್ಥಮರ್ಥ ಸಂಜ್ಞೆ ಇರುತ್ತಿತ್ತು ಅಂತೆಯೇ ಕೂಸನ್ನು ಬಿಟ್ಟು ಹೋಗೆಂದರೂ ಸುಮ್ಮನಿದ್ದಳು. ಕಾರಿನಲ್ಲಿ ಕೂಡ್ರೆಂದರೂ ತಕರಾರು ಮಾಡಲಿಲ್ಲ. ಹೀಗೆ ಮಿಂಚಿನ ವೇಗದಿಂದ–ಊರ ಹೊರಗಿನ ನಾಲ್ಕು ಮೈಲಿನ ಆಸ್ಪತ್ರೆಗೆ ಸೇರಿಸಲಾಯ್ತು. ಪೂರ್ವ ನಿಯೋಜಿತವಾದಂತೆ ಆಕೆಯ ಹೆಸರು ದಾಖಲು ಆಯಿತು. ಅಲ್ಲಿ ಆಕೆಗೆ ಬೇರೆ ಡ್ರೆಸ್ಸು, ನಂಬರು ಕೊಟ್ಟರು. ಒಂದು ಸ್ಪೆಶಲ್ ಕೊಠಡಿಯಲ್ಲಿ ಇಡಲಾಯಿತು. ಕೈದಿಗಳ ಆವಾಸದಂತೆ ಸುತ್ತಲೆಲ್ಲ ಭದ್ರಕಾವಲು. ಆದರೆ ಅವರೆಲ್ಲ ಹೆಂಗಳೆಯರು, ಮುಂಜಾವು ಸಂಜೆಗೆ ಚಹ, ಊಟ ಕೂಡಲಾಗು ದೆಂದು ವ್ಯವಸ್ಥಾಪಕರು ಅರುಹಿದರು. ತಿಲೋತ್ತಮೆಯ ಇಚ್ಛೆಯ ಮೇರೆಗೆ ಪ್ರತಿದಿ ಪತ್ರಿಕ ಕೊಡಲಾಗುತ್ತಿತ್ತು. ಆಕೆಯ ಮಾತೃ ಭಾಷೆಯಲ್ಲಿಯದೇ ಅದು!

(ಮುಂದುವರಿಯುತ್ತದೆ)

---

ಅಂಗದಲ್ಲಿ ಆಚಾರವ ತೋರಿದ. ಆ ಆಚಾರವೇ ಲಿಂಗವೆಂದರುಹಿದ. ಪ್ರಾ ದಲ್ಲಿ ಅರಿವ ನೆಲೆಗೊಳಿಸಿದ. ಆ ಅರಿವೇ ಜಂಗಮವೆಂದು ತೋರಿದ. ಚನ್ನ ಮ ಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ.

—ಅಕ್ಕ ಮಹಾದೇ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣಬಂಧು,

"ನಂಜನಗೂಡು ಚೆಂದ, ನಂದಿಕೋಲು ಚೆಂದ, ಲಿಂಗ ಕಟ್ಟುವನ ಎದೆ ಚೆಂದ" ಎನ್ನುತ್ತದೆ ಜನವಾಣಿ. "ಜನವಾಣಿ ಬೇರು ಕವಿವಾಣಿ ಹೂವು" ಎಂಬ ಮಾತೂ ಇದೆ. ನಂಜನಗೂಡು ಇತಿಹಾಸ ಪ್ರಸಿದ್ಧವಾದ ಪುಣ್ಯಕ್ಷೇತ್ರ. ಕಪಿಲಾ ನದಿ ದಂಡೆಯಲ್ಲಿ ಅರಳಿದ ಧಾರ್ಮಿಕ ತಾಣ. ಇಲ್ಲಿ ಇನ್ನೊಂದು ಪವಿತ್ರ ಕ್ಷೇತ್ರ, ಕಂಬಳೀಶ್ವರರು ಕರ್ತೃಗಳನ ಕರ್ಮ್ಮಟಕ್ಕೆ ಗೌರವ, ಘನತೆ, ಸಿದ್ಧಿಗಳನ್ನು ತಂದುಕೊಟ್ಟ ಸುಕ್ಷೇತ್ರ–ಮಲ್ಲನ ಮೂಲೆ ಮಠ. ಬಸವನಪುರದ ಮಹಾಮನೆ, ಶರಣ ಪರಂಪರೆ ಯಲ್ಲಿ ಅರಳಿದ ಮಠ. ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮಿಗಳು ಸೇವಾ ಮಣಿಹದ ತಂಪು ದೀಪವಾಗಿ ಬೆಳಗುತ್ತಿರುವ ದಿವ್ಯ ಕ್ಷೇತ್ರ. ಶ್ರೀಮಠಕ್ಕೆ ಸುಮಾರು ಇನ್ನೂರು ವರ್ಷಗಳ ಇತಿಹಾಸ. ವಾಕ್ಸಿದ್ಧಿ ಸಂಪನ್ನ ತಪೋಮೂರ್ತಿ ಪೂಜ್ಯ ಶ್ರೀ ಶ್ರೀ ಕಂಬಳೀಶ್ವರರಿಂದ ಸಂಸ್ಥಾಪಿತ. ಪೂಜ್ಯ ಶ್ರೀ ಶ್ರೀ ಇಮ್ಮಡಿ ಕಂಬಳೀಶ್ವರರು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಬೆಳೆದುಬಂದದ್ದು. ಶರಣ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದ ಹೆಮ್ಮೆಯ ಕೋಡು ಅಲ್ಲಿನ ಸಮಾಜ ಬಾಂಧವರದು. 'ಲಿಂಗಕಟ್ಟಿದ ಎದೆ'ಯುಳ್ಳ ಸಮಾಜ ಅದು. ಅಲ್ಲಿ ಬಸವ ಜಯಂತಿ ತಾ. 16-1-86 ರಂದು. ಸಂದರ್ಭ ಶ್ರೀಮಠದ ಗುರುತ್ರಯರ ಗದ್ದುಗೆಗಳಿಗೆ ಸುವರ್ಣ ಕಲಶಾರೋಹಣ ಮಹೋತ್ಸವ ಸಮಾರಂಭ.

ಅದೊಂದು ಅಭೂತಪೂರ್ವ ಸಮಾರಂಭ. ಸುಮಾರು ಎಪ್ಪತ್ತೈದು ಸಹಸ್ರ ಭಕ್ತಸಮೂಹ. ಕಣ್ಣಿಗೆ, ಭಾವುಕ ಹೃದಯಕ್ಕೆ ಹಬ್ಬ. ಎತ್ತ ನೋಡಿದಡತ್ತ ವಚನ ಪಟಗಳು, ತಳಿರು ತೋರಣಗಳು. ಆಧುನಿಕ ತಂತ್ರಜ್ಞಾನ ಬಳಸಿಕೊಂಡ ವ್ಯವಸ್ಥೆ, ದೂರವಾಣಿ, ದೂರದರ್ಶನ, ರಕ್ಷಣಾ ವಿಭಾಗ, ಸ್ವಾಗತ ಸಮಿತಿ ವಿಭಾಗ, ವಸತಿ ವಿಭಾಗ, ಎಲ್ಲ ಸಮರ್ಪಕ. ಎಲ್ಲದರ ಮೇಲೂ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮಿ ಗಳ ಕಣ್ಣೆಚ್ಚರಿಕೆ, ಕಂಬಳೀಶನ ಸೇವೆ ಎಂಬ ಭಕ್ತಿಭಾವ.

ಸಮಾರಂಭದಲ್ಲಿ ಸಮಾವೇಶಗೊಂಡ ಪೂಜ್ಯ ಗುರು-ವಿರಕ್ತಮಠಗಳ ಶ್ರೀ ಶ್ರೀ ಗಳು ಸುಮಾರು ಇನ್ನೂರಕ್ಕೂ ಹೆಚ್ಚು. ಅವರಿಗೆಲ್ಲರಿಗೂ ತಾವು "ಮಹಾಮನೆಗೆ" ಕಂಬ

ಳೇಶ್ವರರ ಅನುಭವ ಮಂಟಪಕ್ಕೆ ಬಂದಿದ್ದೇವೆಂಬ ಹಿಗ್ಗು. ಪರಮ ಪೂಜ್ಯ ಸಿದ್ಧಗಂಗ
ಶ್ರೀ ಶ್ರೀ ಗಳವರ ಅಧ್ಯಕ್ಷತೆ. ರಾಜ ಗುರು ತಿಲಕ ಪರಮ ಪೂಜ್ಯ ಜಗದ್ಗುರು ಶ್ರೀ
ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರಿಂದ ಉದ್ಘಾಟನೆ. ಮುಂಡರ
ಸಂಸ್ಥಾನ ಮಠದ ಪೂಜ್ಯ ಜಗದ್ಗುರು ಶ್ರೀ ಶ್ರೀ ಅನ್ನದಾನೇಶ್ವರ ಸ್ವಾಮಿಗಳಿಂದ ಭಾ
ಚಿತ್ರದ ಅನಾವರಣ. ಮಾದಾಪಟ್ಟಣದ ಪೂಜ್ಯ ಶ್ರೀ ಶ್ರೀ ಸದಾಶಿವಸ್ವಾಮಿಗಳ
ರಿಂದ ಅಷ್ಟಾವರಣ ವಿವೇಚನೆ. ಶರಣೆ ಶ್ರೀಮತಿ ಜಗದಾಂಬ ಮಲ್ಲೇದೇವರು
ಮತ್ತು ಶ್ರೀ ಹೆಚ್. ಎ. ವೀರಭದ್ರಯ್ಯ ಅವರಿಂದ, ಉಪನ್ಯಾಸಗಳು ನಡೆದುವು.

ಬಸವಣ್ಣ ಜಗತ್ತಿನ ಧರ್ಮ ದೀಪಕರಲ್ಲೆಲ್ಲ ವಿಶಿಷ್ಟರಾದವರು. ವೈಚಾರಿಕತೆ
ಷ್ಟೆ ಭಕ್ತಿಯ ಪ್ರಾಣರಸ ತುಂಬಿದವರು. ಮನುಷ್ಯ ಪರಿಪೂರ್ಣನಾಗುವುದು ಬುದ್ಧಿಯ
ಭಾವಗಳಿಗೆ, ಆಲೋಚನೆಯಷ್ಟೆ ಅಂತಃಕರಣಕ್ಕೆ ಬೆಲೆಕೊಟ್ಟಾಗ "ಇವನಾರವ
ಇವನಾರವ ನೆಂದೆನಿಸದಿರಯ್ಯಾ, ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯ
ಎಂಬುದೇ ಬಸವಣ್ಣನವರ ಜೀವನ ಮಂತ್ರ. ಹೃದಯವನ್ನೆಲ್ಲ ದೀನರಿಗೆ, ದುಃಖಿ
ಗಳಿಗೆ, ಮಾತು ಆಡುವ ಪುಣ್ಯಪಡೆದಿದ್ದರೂ ಮೂಕರಾಗಿದ್ದವರಿಗೆ, ಸೂರೆಗೊಟ್ಟರು
ಮಾದಾರ ಚನ್ನಯ್ಯನನ್ನ, ಡೋಹರ ಕಕ್ಕಯ್ಯನನ್ನ ಗೋತ್ರ ಪುರುಷರೆಂದು ಕೊ
ಳಿತ್ತಿ ಘೋಷಿಸಿದರು. ವ್ಯಕ್ತಿಯ ಚಾರಿತ್ರ್ಯ ಶುದ್ಧಿಯ ಬಗ್ಗೆ ಬಸವಣ್ಣನವರಿಗೆ ಅಪಾರ
ಶ್ರದ್ಧೆ 'ಪರಧನ, ಪರವಧು' ಗಳನ್ನು ಕಣ್ಣೆತ್ತಿ ನೋಡದಂತೆ ಬಾಳಿತೋರಿದರು. ಕಾಯ
ಕವನ್ನು ಜಗತ್ತಿನ ಸರ್ವಕಾಲಿಕ ಸಿದ್ಧಮಂತ್ರವನ್ನಾಗಿಸಿದರು. ದಾಸೋಹವನ್ನು
ಸಾರ್ಥಕಗೊಳಿಸಿದರು. ಅವರು ಗುರು ಲಿಂಗ ಜಂಗಮದಲ್ಲಿ ಸಂಗಮನಾಥನನ್ನು
ಸಮಾಜದ ಮಂಗಳವನ್ನು ಕಂಡರು. ನಮಗೆ ಇಂದು ಅವರು ಬಿಟ್ಟುಹೋದ ವಜ್ರ
ಸಂಪತ್ತು ದಾರಿ ದೀಪವಾಗಬೇಕು. ಅದೊಂದೇ ನಮ್ಮೆಲ್ಲರಿಗೆ ಶ್ರೆಯೋಮಾರ್ಗ"
ಎಂದು ಪರಮ ಪೂಜ್ಯ ಶ್ರೀ ಶ್ರೀ ಗಳವರು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡಿದರು.

ಉದ್ಘಾಟನೆಮಾಡಿದ ಪೂಜ್ಯ ಸುತ್ತೂರು ಶ್ರೀ ಶ್ರೀಗಳವರು, ಅಷ್ಟಾವರಣ
ಸಂಪನ್ನರಾಗಿ, ನಿತ್ಯಾಚಾರನಿಷ್ಠರಾಗಿ, ಗುರುಲಿಂಗ ಜಂಗಮ ಪ್ರೇಮಿಗಳಾಗಿ ಎಂದು
ಆಶೀರ್ವದಿಸುತ್ತ ಯುವ ಜನಾಂಗ ಲಿಂಗದ ಬಗ್ಗೆ ಭಕ್ತಿ, ಭಸ್ಮದ ಬಗ್ಗೆ ಶ್ರದ್ಧೆಯನ್ನು
ಳಿಸಿಕೊಳ್ಳುವುದು ಸಮಾಜದ ಆರೋಗ್ಯವೆಂದು ಅಪ್ಪಣೆ ಕೊಡಿಸಿದರು.

ದ್ವಿತೀಯ ಅಧಿವೇಶನದಲ್ಲಿ ಹೊರಪೇಟೆಯ ಪೂಜ್ಯ ಶ್ರೀ ಶ್ರೀ ಸಂಗನ ಬಸವ
ಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. 'ಪಂಚಾಚಾರ ನಿರೂಪಣೆ' ಯ ಗೋಷ್ಠಿಯಲ್ಲಿ
ಹುಲ್ಲಹಳ್ಳಿ ಪೂಜ್ಯ ಶ್ರೀ ಶ್ರೀ ಸದಾಶಿವ ಸ್ವಾಮಿಗಳು, ಶರಣ ಶ್ರೀ ಹೆಚ್. ಗಂಗಾ
ಧರನ್, ಶರಣೆ ಶ್ರೀಮತಿ ಪಾರ್ವತಮ್ಮ ಚಂದ್ರಣ್ಣ, ಶರಣ ಶ್ರೀ ಪಿ. ಬಸವಣ್ಣನವರು
ಉಪನ್ಯಾಸ ಮಾಡಿದರು. (50ನೇ ಪುಟ ನೋಡಿ)

46ನೇ ಪುಟದಿಂದ ಮುಂದುವರಿದಿದೆ)

ಗಳನ್ನು ಕಾಣುವುದೇ ಕಾರಣವಾಗಿದೆ. ಯಾವುದಾದರೂ ನೆಪದಿಂದ ಅವುಗಳನ್ನು ಬಿಡುವುದು ರೂಪವಾಗಿದೆ. ಬಿಟ್ಟ ವಿಷಯುಗಳನ್ನು ಪುನಃ ಬಯಸದಿರುವುದು ಕಾರ್ಯವಾಗಿದೆ. ಈ ರೀತಿ ವೈರಾಗ್ಯಕ್ಕೆ ಕಾರಣ, ರೂಪಕಾರ್ಯಗಳಾಗಿವೆ "ವಿರತಿಗೆಲ್ಲವನು ತೃಣವೆಂದು ಬಗೆದು........ಅವಧಿ" ಇವೆಲ್ಲವನ್ನೂ ಉದಾಸೀನ ಬುದ್ಧಿಯಿಂದ ನೋಡುವುದೇ ವೈರಾಗ್ಯಕ್ಕೆ ಅವಧಿಯಾಗಿದೆ.

ಭೋಗೇ ರೋಗಭಯಂ, ಕುಲೇ ಚ್ಯುತಿಭಯಂ,
ರೋಪೇ ಜರಾಯುಭಯಂ, ಮಾನೇ ದೈನ್ಯಭಯಂ.
ಗುಣೇ ಖಲಿಭಯಂ ಶಾಸ್ತ್ರೇ ವಾದಭಯಂ
ವಿತ್ತೇ ನೃಪಾಲಾದ್ಭಯಂ, ಬಲೇ ರಿಪುಭಯಂ.
ಸರ್ವವಸ್ತು ಭಯಾನಿತ್ವಂ ಭುವಿನ್ನೃಣಾಂ ವೈರಾಗ್ಯ ಮೇಲಾಭಯಂ।

—ಭರ್ತೃಹರಿ.

ವೈರಾಗ್ಯವು ಆಶೆ. ಅತೃಪ್ತಿ. ಭಯಾದಿಗಳನ್ನು ದೂರಮಾಡಿ ಸುಖಶಾಂತಿ ನಿರ್ಭಯತೆಗಳನ್ನುಂಟುಮಾಡುವ ಕಲ್ಪವೃಕ್ಷ.

"ವಿರತಿಯಿಂದಿತರ ಸಂಪದ ಸುಖವುಂಟೆ?
ಪರತರ ಸುಖವಾಗುವುದು ಅಖಿಳ ಭೋಗವಿರತಿ"

—ನಿಜಗುಣ ಶಿವಯೋಗಿ.

ಪ್ರಪಂಚದಲ್ಲಿ ವೈರಾಗ್ಯ ಪುರುಷನೇ ನಿಜವಾದ ಸುಖಿ, ನಿರ್ಭಯಶಾಲಿ, ಹಾಗೂ ಶ್ರೀಮಂತ. ಅವನ ಸಂಪತ್ತಿಗೆ ಯಾವುದು ಸರಿಗಟ್ಟಲಾರದು.

## ಸತಿಪತಿ ಭಾವದ ವಚನಗಳು

ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಿಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ, ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು, ಚನ್ನಮಲ್ಲಿಕಾರ್ಜುನಯ್ಯ, ನನಗೆ ನೀನಾಗಬೇಕೆಂದು.

ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವ ನಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ, ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ, ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು.

—ಅಕ್ಕಮಹಾದೇವಿ

48ನೇ ಪುಟದಿಂದ ಮುಂದುವರಿದಿದೆ)

ರಾತ್ರಿ ಹತ್ತು ಘಂಟೆಗೆ 'ಜಗಜ್ಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶಿತ ವಾಯಿತು–ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ, ಶ್ರೀ ಸಿದ್ಧಗಂಗಾ ಮಠ ಅವರಿಂದ. ಸುಮಾರು ಅರುವತ್ತು ಸಾವಿರ ಭಕ್ತರು ನಾಟಕ ನೋಡಿದರು. ದಾಖಲೆ ಸ್ಥಾಪಿಸಿ ದರು, ಸ್ಥಳಾಭಾವದಿಂದ ಸುಮಾರು ಇಪ್ಪತ್ತುಸಾವಿರ ಮಂದಿ ನಿರಾಶರಾಗಿದುದು ತುಂಬಾ ನೋವನ್ನುಂಟು ಮಾಡಿತು ಪೂಜ್ಯ ಸ್ವಾಮಿಗಳವರಿಗೆ. ಗ್ರೀನ್‌ರೂಂ ಸಹ ಪ್ರೇಕ್ಷಕಗೃಹವಾಗುವ ಪರಿಸ್ಥಿತಿ ಬಂದಿತು. ಮೂರು ಕಡೆಯ ತೆರೆಗಳನ್ನು ತೆಗೆಯ ಲಾಯಿತು ನಂಜನಗೂಡು ಪ್ರದೇಶದ ಜನಸಮುದಾಯ ಜಲಮಲ ಬಾಧೆಗೂ ಎದ್ದು ಹೋಗದ ಹಾಗೆ ನಾಟಕ ನೋಡಿ ತಣಿದರು. ವಚನಗಾಯನ ಕೆಲವರು ಮೆಚ್ಚಿದರೆ, ರಂಗಸಜ್ಜಿಕೆ ಕೆಲವರು ಮೆಚ್ಚಿದರು ಎಲ್ಲರೂ ಮೆಚ್ಚಿದ್ದು ಪರಮ ಪೂಜ್ಯ ಶ್ರೀ ಶ್ರೀಗಳ ವರ 'ಗ್ರಾಮಾಂತರ ಬಸವ ಜಯಂತಿ'ಯ ಮೌನ ಸೇವಾ ಕ್ರಾಂತಿಯನ್ನ ಮಲ್ಲನ ಮೂಲೆಯ ಶ್ರೀಮಠದ ಪೂಜ್ಯ ಶ್ರೀ ಶ್ರೀಗಳವರಿಗಂತೂ ಇನ್ನೊಂದು ದಿನವೂ ನಾಟಕ ಮಾಡಿಸಬೇಕಾಗಿತ್ತು ಎಂಬ ತೀವ್ರ ಇಚ್ಛೆ. ಜಯಂತಿಯಾದ ಮರುದಿನವೂ 17-1-86 ರಂದು ಸುವರ್ಣ ಕಲಶಾರೋಹಣ ಸಂದರ್ಭದಲ್ಲಿ ಶಿವಾನುಭವ ಗೋಷ್ಠಿಗಳು ನಡೆದು, ಪೂಜ್ಯರ ಸಂಕಲ್ಪ ತುಂಬಿ ಬಂದಿತು. (ಮತ್ತೆ ಬರೆಯುತ್ತೇನೆ)

## ಸಂಸಾರ ಹೇಯ

ಅಯ್ಯಾ ಆದಿ ಅನಾದಿಯಿಂದತ್ತತ್ತ ಮೀರಿ ತೋರುವ ನಿತ್ಯ ನಿರಂಜನ ಗುರು ಲಿಂಗಜಂಗಮ ಶಿವಶರಣರ ಸತ್ಯ ಸನ್ಮಾರ್ಗದ ಗೊತ್ತಿನ ಮರಿಯಾದೆಯನರಿಯದೆ ಮರ್ತ್ಯದ ಜಡಜೀವಿ ಭವಿ ಪ್ರಾಣಿಗಳ ಹಾಗೆ ಗುಹ್ಯಾಲಂಪಟಕ್ಕಿಚ್ಛೆಸಿ, ದಾಸಿ ವೇಶಿ ಯರ ಕೂಡಿಕೊಂಡು ಭುಂಜಿಸಿ ಷಟ್ಸ್ಥಲ ಬ್ರಹ್ಮಾನುಭಾವವ ಕೇಳಿ ಹೇಳುವ ಮೂಳ ಚುಕ್ಕೆಯರ ಕಂಡು ಎನ್ನ ಮನ ನಾಚಿತ್ತು ಕಾಣಾ. ಅವ್ವ ನೀಲಮ್ಮನ ಮೋಹದ ಮಗಳೆ, ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿ, ನಿಃಕಳಂಕ ಸದ್ಗುರು ಪ್ರಭುದೇವರ ಸತ್ಯದ ಸೊಸೆಯೇ, ಚನ್ನಮಲ್ಲಿಕಾರ್ಜುನನರ್ಧಾಂಗಿನಿಯೆ, ಚಿಕ್ಕಯ್ಯ ಪ್ರಿಯ ಸಿದ್ಧ ಲಿಂಗನೊಡ ಹುಟ್ಟಿದಳೆ, ಕೇಳವ್ವ ಇದು ಮರ್ತ್ಯದ ಜಡಜೀವಿ ಭ್ರಷ್ಟರ ಬಾಳುವೆ ಎಂದೆ.

## ಲಿಂಗಧಾರಣ

ಅಯ್ಯಾ ಪಾತಾಳವಿತ್ತಿತ್ತ, ಶ್ರೀಪಾದವತ್ತತ್ತ. ಬ್ರಹ್ಮಾಂಡವಿತ್ತಿತ್ತ, ಮಣಿ ಮುಕುಟವತ್ತತ್ತ. ಅಯ್ಯ ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ. ಚನ್ನಮಲ್ಲಿ ಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ.

—ಅಕ್ಕಮಹಾದೇವಿ ವಚನಗಳು

# ತುಮಕೂರು ಧಾನ್ಯ ವರ್ತಕರ
# ಸಹಕಾರ ಬ್ಯಾಂಕ್ ನಿಯಮಿತ

ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-೧

| | (ಲಕ್ಷಗಳಲ್ಲಿ) | | (ಲಕ್ಷಗಳಲ್ಲಿ) |
|---|---|---|---|
| ಅಧಿಕೃತ ಷೇರು ಬಂಡವಾಳ : | 20-00 | ಡಿಪಾಜಿಟ್‌ಗಳು : | 184-40 |
| ಪಾವತಿಯಾದ ಷೇರು ಬಂಡವಾಳ: | 14-96 | ಚಾಲ್ತಿ ಬಂಡವಾಳ: | 275-14 |
| ರಿಸರ್ವ್ ಮತ್ತು ಇತರೇ ನಿಧಿಗಳು: | 75-78 | ಸಾಲ, ಮುಂಗಡಗಳು: | 198-70 |

ಭವ್ಯ ಭವಿತವ್ಯಕ್ಕಾಗಿ.....................

★ ಉಳಿಸಿ ಮಿತವ್ಯಯದಿಂದ !

★ ಗಳಿಸಿ ಬುದ್ಧಿವಂತಿಕೆಯಿಂದ !

★ ಬೆಳಸಿ ಠೇವಣಾತಿಗಳಿಂದ !

- ಠೇವಣಿ ವಿಮಾ ಯೋಜನಾ ಪ್ರಕಾರ ಪ್ರತಿಯೊಬ್ಬ ಠೇವಣಿದಾರರ ರೂ. 30,000-00 ವರೆಗಿನ ಬ್ಯಾಂಕಿನ ಠೇವಣಾತಿಗಳನ್ನು ಡಿಪಾಜಿಟ್ ಇನ್ಶೂರೆನ್ಸ್ ಕಾರ್ಪೊರೇಷನ್ ಸಂಪೂರ್ಣವಾಗಿ ರಕ್ಷಿಸುತ್ತದೆ.
- ಇತರೇ ವಾಣಿಜ್ಯ ಬ್ಯಾಂಕುಗಳಿಗಿಂತ ಠೇವಣಿ ಖಾತೆಗಳ ಮೇಲೆ ಶೇಕಡ 1 ರಂತೆ ಹೆಚ್ಚಿನ ಬಡ್ಡಿದರವನ್ನು ಈ ಕೆಳಕಂಡಂತೆ ಕೊಡಲಾಗುವುದು.

## ನಿಶ್ಚಿತ ಠೇವಣಾತಿ

(ಬಡ್ಡಿ ದರಗಳು ಅಕ್ಟೋಬರ್ 26, 1982 ರಿಂದ)

| | |
|---|---|
| ಒಂದು ವರ್ಷದಿಂದ ಎರಡು ವರ್ಷಗಳವರೆಗೆ | ಶೇ. 9 |
| ಎರಡು ವರ್ಷದಿಂದ ಮೂರು ವರ್ಷಗಳವರೆಗೆ | ಶೇ. 10 |
| ಮೂರು ವರ್ಷದ ಮೇಲ್ಪಟ್ಟು ಐದು ವರ್ಷದ ಒಳಗೆ | ಶೇ. 11 |
| ಐದು ವರ್ಷದ ಮೇಲ್ಪಟ್ಟು | ಶೇ. 12 |

ಉಳಿತಾಯ ಖಾತೆ ಶೇ. 6

**ಎಲ್ಲಾ ರೀತಿಯ ಬ್ಯಾಂಕಿಂಗ್ ವ್ಯವಹಾರಗಳಿಗೆ ಒಮ್ಮೆ ಸಂದರ್ಶಿಸಿ**

ಎಸ್. ಆರ್. ಜಗದೀಶಾರಾಧ್ಯ
ಅಧ್ಯಕ್ಷರು

ಪಿ. ಜಿ. ಶ್ರೀನಿವಾಸಶೆ
ಉಪಾಧ್ಯಕ್ಷ

ಟಿ. ಎಸ್. ಸದಾಶಿವಯ್ಯ
ಕೋಶಾಧಿಕಾರಿಗಳು

ಡಿ. ಪಿ. ರಾಜ್‌ಕುಮಾರ್, ಬಿ.ಕಾ
ಕಾರ್ಯದರ್ಶಿ

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.